

ಫೆಬ್ರವರಿ-1988

ಸಂಪುಟ–೧೪  ಸಂಚಿಕೆ–೧

# ಸಿದ್ಧಗಂಗಾ

# ಹಳೆಯ ವಿದ್ಯಾರ್ಥಿಗಳ ಸಂಘ

## ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲಾ.

ಮಾನ್ಯರೇ,

ದಿನಾಂಕ 13-3-1988 ನೇ ಭಾನುವಾರ ಬೆಳಿಗ್ಗೆ 11.00 ಘಂಟೆಗೆ ಸಂಘದ ಕಾರ್ಯಕಾರಿ ಸಮಿತಿಯು ಸಭೆಯು ಪ್ರಧಾನ ಕಾರ್ಯದರ್ಶಿಯವರಾದ ಮಾನ್ಯ ಶ್ರೀ ಪ್ರೊ|| ಎಂ.ಎಸ್ ಚನ್ನಬಸಪ್ಪನವರ ಅಧ್ಯಕ್ಷತೆಯಲ್ಲಿ ಸಂಘದ ಕಾರ್ಯಾಲಯದಲ್ಲಿ ಜರುಗಿ ಈ ಕೆಳಕಂಡ ವಿಷಯಗಳ ಬಗ್ಗೆ ಚರ್ಚಿಸಿ ತೀರ್ಮಾನಿಸಿದ ನಿರ್ಣಯಗಳನ್ನು ತಮ್ಮ ಅವಗಾಹನೆಗೆ ತರಬಯಸುತ್ತೇನೆ.

1 a) ವಿಷಯ. ಹಳೆಯ ವಿದ್ಯಾರ್ಥಿ ಸಂಘದ-ತನಿಖಾ ವರದಿಯ ವಿಚಾರ

**ತೀರ್ಮಾನ:–** 1984 85, 1985-86 ಮತ್ತು 1986-87 ನೇ ಸಾಲುಗಳ ಹಳೆಯ ವಿದ್ಯಾರ್ಥಿ ಸಂಘದ ಲೆಕ್ಕಪತ್ರಗಳ ಆಡಿಟ್ ವರದಿಗಳನ್ನು ಜಂಟಿ ಕಾರ್ಯದರ್ಶಿಯವರು ಸಭೆಯ ಮುಂದೆ ಓದಿದರು, ಸಭೆಯು ಈ ಬಗ್ಗೆ ಚರ್ಚಿಸಿ ಅನುಮೋದನೆ ನೀಡಿತು.

b) ವಿಷಯ. ವಸ್ತುಪ್ರದರ್ಶನ ಸಮಿತಿಯ ಲೆಕ್ಕಪತ್ರಗಳ ಆಡಿಟ್-ವರದಿಯ ವಿಚಾರ

**ತೀರ್ಮಾನ:–** 1984-85, 1985-86 ಮತ್ತು 1986-87 ನೇ ಸಾಲುಗಳ ವಸ್ತುಪ್ರದರ್ಶನ ಸಮಿತಿಯ ಲೆಕ್ಕಪತ್ರಗಳ ಆಡಿಟ್ ವರದಿಗಳನ್ನು ಜಂಟಿ ಕಾರ್ಯದರ್ಶಿಯವರು ಸಭೆಯ ಮುಂದೆ ಓದಿದರು, ಸಭೆಯು ಈ ಬಗ್ಗೆ ಚರ್ಚಿಸಿ ಅನುಮೋದನೆ ನೀಡಿತು.

2 ವಿಷಯ. 1987-88 ನೇ ಸಾಲಿನ ಆದಾಯ-ವೆಚ್ಚದ ಲೆಕ್ಕ-ಪತ್ರಗಳನ್ನು ಹಾಜರು ಪಡಿಸುವ ಬಗೆಗೆ.

**ತೀರ್ಮಾನ:–** 1987–88 ನೇ ಸಾಲಿನ ಲೆಕ್ಕ ಪತ್ರಗಳನ್ನು 1988ರ ಮಾರ್ಚಿ ಆಖೈರಿಗೆ ಜಮಾ-ಖರ್ಚು, ಲಾಭ-ನಷ್ಟ ಮತ್ತು ಆಸ್ತಿ-ಜವಾಬ್ದಾರಿ ತಃಖ್ತೆ-ಗಳನ್ನು ಎಲ್ಲಾ ವಿಭಾಗದವರೂ ತಯಾರಿಸಿ ಮುಂದಿನ ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ಹಾಜರು ಪಡಿಸುವಂತೆ ಸಂಬಂಧಪಟ್ಟವರಿಗೆ ಆದೇಶ ನೀಡಲಾಯಿತು.

(ಮೂರನೇಯ ರಕ್ಷಾಪುಟ ನೋಡಿ)

# ಸಿದ್ಧಗಂಗಾ

ಸಂಪುಟ-೨೪ ಸಂಚಿಕೆ-೨ ಫೆಬ್ರವರಿ, ೧೯೮೮

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ನಿದ್ದೆ ಎಚ್ಚರಗಳಲಿನಿತ್ಯ ನೀ ಪೊರೆದಿರುವೆ
ಸದ್ದುಗದ್ದಲವಿರದೆ ತಡೆಸಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಬಸವ ಶ್ರೀ ತೀರ್ಥದಲಿ ಜನಮನವತೊಳೆತಿಹೆ
ಬಸವ ಮಂತ್ರಾಕ್ಷರವ ಕಲಿಸಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ತತ್ವ ಬೋಧಕರೆಲ್ಲ ಸತ್ಯವರಿಯದೆನಿಲಯು
ಸ್ತುತ್ಯ ಆಚರಣೆಯೆ ಅರುಹಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್. ವಿ. ವೀರಭದ್ರಯ್ಯ.

# ಈ ಸಂಚಿಕೆಯಲ್ಲಿ

# ಶ್ರೀ ವಾಣಿ



ಇಂದು ಜನತೆಯಲ್ಲಿ ನೈತಿಕ ಸಂಪತ್ತಿನ ಕೊರತೆ ಇದೆ. ಇದರ ಪರಿಣಾಮ ಎಲ್ಲ ಸಮಾಜ ಮತ್ತು ರಾಷ್ಟ್ರದ ಮೇಲೆ ಆಗಿದೆ. ಎಲ್ಲಿ ನೋಡಿದರೂ ಅನೀತಿ ಅಕ್ರಮಗಳಿಂದ ಕೂಡಿದ ವ್ಯವಹಾರಗಳಿಂದ ಅಶಾಂತಿ ತಾಂಡವವಾಡುತ್ತಿದೆ. ಇದಕ್ಕೆ ಕಾರಣ ಮತ್ತು ಪರಿಹಾರಗಳನ್ನು ಕಂಡುಕೊಳ್ಳದಿದ್ದರೆ ಭಾರತೀಯರ ಭವಿಷ್ಯ ದುರಂತದಲ್ಲಿ ಪರ್ಯವಸಾನವಾದೀತು. ನಮ್ಮ ಪೂರ್ವಜರ ಉಸಿರು ನೈತಿಕತೆ ನಮ್ಮವರ ಅಂತಃ ಸತ್ವ ನೈತಿಕ ಜೀವನ, ಬದುಕು ಸುಸಂಸ್ಕೃತ ಹಾದಿಯ ಮೇಲೆ ನಿಂತದ್ದು. ನಾವಿಂದು ನಮ್ಮ ತನವನ್ನು ಮರೆತಿದ್ದೇವೆ. ಸ್ವಾರ್ಥದಿಂದ ನೈತಿಕತೆಯನ್ನು ಕಡೆಗಾಣಿಸಿದ್ದೇವೆ. ಧೂರ್ತರು. ದುಷ್ಟರು ನೈತಿಕ ಜೀವನವುಳ್ಳವರನ್ನು ಹೆಸರಿಸಿ ಬದುಕಲಾರಂಭಿಸಿದ್ದಾರೆ. ಸುಸಂಸ್ಕೃತರ ಸಾತ್ವಿಕ ಜೀವನ ದುಷ್ಟರ ಉಪಟಳದಿಂದ ಕಮರಿ ಹೋಗಿದೆ. ನೀತಿಯುತ ಸಮಾಜ ಅನೀತಿವಂತರ ಅರ್ಭಟಕ್ಕೆ ತತ್ತರಿಸಿದೆ. ನೀತಿವಂತರ ಬದುಕು ಹುಲಿಗಳ ಮಧ್ಯೆ ಬದುಕುವ ಹುಲ್ಲೆ ಮರಿಯ ಸ್ಥಿತಿಯಂತಾಗಿದೆ. ದುಷ್ಟರ ಸಮಯ ಸಾಧಕರ ವಂಚಕರ ಸ್ವಾರ್ಥಿಗಳ ಸುಳ್ಳು ಪ್ರಚಾರ ನಯವಂಚಕ ಪ್ರಕರಣಗಳ ಅರ್ಭಟದಲ್ಲಿ ಸಾತ್ವಿಕರ ಕೂಗು ಮುಚ್ಚಿ ಹೋಗುತ್ತದೆ. ಸುಳ್ಳು ಪ್ರಚಾರದ ಅಬ್ಬರ ಬೊಬ್ಬೆಗಳಿಗೆ ಮನ ಸೋತ ಜನತೆ ವಿಚಾರ ಮಾಡಲು ವಿಮುಖವಾಗುತ್ತಿದೆ. ಅಧಿಕ ಜನ ಬೆಂಬಲದ ಸವಿ ಮೊಡ್ಡಿ ಕೆಲವರು ಜಾರಿಕೊಳ್ಳಲು ಮನಸ್ಸು ಮಾಡುತ್ತಾರೆ. ದುಷ್ಟರ ನೀಚ ಕೃತ್ಯಕ್ಕೆ ಚಿಂತನಶೀಲರು ಭಯಗೊಂಡು ಮೌನತಾಳುತ್ತಾರೆ. ವಿಚಾರವಂತರ ಈ ಮೌನ ಸಾಧುವಲ್ಲ. ಆರೋಗ್ಯಕರವೂ ಅಲ್ಲ. ಅನೈತಿಕ ವ್ಯವಹಾರಗಳವರೆಗೆ ದುರ್ನಡತೆಯಿಂದ ಸಮಾಜ ಮತ್ತು ಜನತೆ ಅನೇಕ ದುರಂತಗಳನ್ನು ಎದುರಿಸಬೇಕಾಗುತ್ತದೆ ಎಂಬ ಸತ್ಯವನ್ನು ನೀತಿವಂತ ಜನತೆ ಮನಮುಟ್ಟುವಂತೆ ತಿಳಿಸಬೇಕಾಗುತ್ತದೆ. ಜಾಣ್ಮೆಯಿಂದ ಪರಿಹಾರವನ್ನು ಕಂಡುಕೊಳ್ಳಬೇಕಾಗುತ್ತದೆ. ಮೆಚ್ಚಿ ಮೆಚ್ಚಿಗೂ ಎಚ್ಚರಿಸುವ ಕಾರ್ಯ ಭರದಿಂದ ಸಾಗಬೇಕಾಗಿದೆ. ಯುವ ಜನಾಂಗ ನೀತಿವಂತರಾಗಿ ವಿಚಾರ ಶೀಲರಾಗಿ ರಾಷ್ಟ್ರದ ನಿರ್ಮಾಣದ ಮುಂಚೂಣಿಯಲ್ಲಿ ಪಾಲ್ಗೊಳ್ಳಬೇಕಾಗಿದೆ. ಪ್ರಾಮಾಣಿಕ ಪ್ರಯತ್ನ ಮಾಡಿ ರಾಷ್ಟ್ರದ ಭವಿಷ್ಯವನ್ನು ಸುಂದರವಾಗಿ. ಸಂಪತ್‌ಭರಿತವಾಗಿ, ನೈತಿಕ ಶೀಲ ಸೌಹಾರ್ದಗಳನ್ನು ಬೀರುವಂತೆ ರೂಪಿಸಬೇಕಾಗಿದೆ. ನೆಮ್ಮದಿಯುತ್ತ ಶಾಂತಿಯನ್ನು ನೆಲೆಗೊಳಿಸಬೇಕಾಗಿದೆ.

ದಿನಾಂಕ - 23 - 2 - 88 ರಂದು ಬೆಳಿಗ್ಗೆ 9 ಘಂಟೆಯಲ್ಲಿ S I T ಬಿರ್ಲಾ ಸಭಾಂಗಣದಲ್ಲಿ N C C ಸೆಮಿನಾರ್ ಗ್ರೂಪ್ 'A' ಸಮಾರಂಭವನ್ನು ಉದ್ಘಾಟಿಸುತ್ತಾ ಶ್ರೀ ಶ್ರೀಗಳವರು ಆಶೀರ್ವಚನ ನೀಡಿದರು. ನಾವು ಭಾರತೀಯರು ನೈತಿಕ ಸಂಪತ್ತುಳ್ಳವರು ನಮ್ಮ ಪೂರ್ವಜರು ನಮಗೆ ಕೊಟ್ಟು ಹೋದ ಸಂಪತ್ತೆಂದರೆ ಅಮೂಲ್ಯವಾದ ನೈತಿಕ ಸಂಪತ್ತು. ಇಂದಿನ ಯುವ ಜನತೆ ನಮ್ಮ ಪೂರ್ವಜರ ನೀತಿವಂತ ಬಾಳುವೆಯನ್ನು ಅರಿತು ಕೊಳ್ಳಬೇಕು ಆಚರಣೆಗೆ ತರಬೇಕು. ನೈತಿಕ ಮತ್ತು ಶಾಂತಿ ಸಂದೇಶವನ್ನು ನಮ್ಮವರು ನಮಗೆ ಮಾತ್ರ ಕೊಟ್ಟು ಹೋಗಲಿಲ್ಲ. ಜಗತ್ತಿಗೇ ಶಾಂತಿ ಸಂದೇಶವನ್ನು ಕೊಟ್ಟರು.

# ಸಿದ್ಧಗಂಗಾ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
**ಪ್ರೊ॥ ಚನ್ನಪ್ಪ ಎರೇಸೀಮೆ**

* * *

ಸಂಪಾದಕರು
**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು
**ಬಿ. ವೀರಭದ್ರಯ್ಯ**
**ಪಿ. ಎಸ್. ಚಂದ್ರಶೇಖರಯ್ಯ**

* * *

ಜಾಹೀರಾತು ವಿಭಾಗ
**ಎಂ. ರೇಣುಕಾರಾಧ್ಯ**

* * *

ಪ್ರಸಾರ ವಿಭಾಗ
**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು
**ಹೆಚ್. ಬಿ. ಗಂಗಾಧರಯ್ಯ**
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
**ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ
**ಶ್ರೀ ಸಿದ್ಧಗಂಗಾ ಕ್ಷೇತ್ರ**

ಚಂದಾ ವಿವರ

ವಾರ್ಷಿಕ ಚಂದಾ 20 - 00 ರೂ
ಅಜೀವ ಸದಸ್ಯತ್ವ 201 - 00 ರೂ


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

**" ಸಂಪಾದಕರು "**
**'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

## ಜಂಗಮ ದೀಕ್ಷೆ

' ಜಂಗಮ ' ವೀರಶೈವ ಧರ್ಮದಲ್ಲಿ ಆರಾಧ್ಯಮೂರ್ತಿ. ಅಷ್ಟಾವರಣಗಳಲ್ಲಿ ಕ್ರಮ ಶ್ರೇಣಿಯಲ್ಲಿ ಮೂರನೆಯದು. ಉದಾಸ್ಯ ವಿಶೇಷ. ಶರಣರ ವೈಚಾರಿಕ ಕಮ್ಮಟದಲ್ಲಿ ಪುಟವಿಟ್ಟ ಬಂಗಾರ. ಕ್ರಿಯಾಶೀಲ ಜಗದ ಪ್ರತಿನಿಧಿ. ' ಜಂಗಮ ' ಎಂದರೆ ಚಲನ ಶೀಲವಾದದ್ದು ಎಂದೇಅರ್ಥ. ಹರಿವನದಿಯಂತೆ-ನಿತ್ಯ ಪರಿವರ್ತನ ಶೀಲನೇ ಅದರ ಲಕ್ಷಣ ಪರಿವರ್ತನೆ ಬಾಹ್ಯದ ವೇಷ ಭೂಷಣಗಳಿಗೆ ಸಂಬಂಧಿಸಿದ್ದಲ್ಲ. ಆಂತರಂಗಿಕ ಬೆಳವಣಿಗೆಯ ಪ್ರಕ್ರಿಯೆ. ಹರಿವನನೀರು ಎಷ್ಟು ಪರಿಶುದ್ಧವೋ ಅಷ್ಟೇ ಜಂಗಮವೂಕೂಡ. ಜಂಗಮ ಎಂಬ ಮಾತು ಸಂಸ್ಕೃತವಾದ್ದರೂ ಅದು ಅರ್ಥವ್ಯಾಪ್ತಿಯನ್ನು ಪಡೆದು ' ಜಂಗಮ ಮುಗಿಲಗಲಮಿಗೆಯಗಲ'ವಾಗಿ ಬೆಳೆದು ಬಂದದ್ದು ಬಸವಾದಿ ಶರಣರ ಆಚಾರ—ವಿಚಾರ ಪ್ರಣಾಲಿಯ ಮೂಲಕ. ಅನುಭವದ ತೆಕ್ಕೆಗೆ ಬರದ ಯಾವುದನ್ನೂ ಜಂಗಮ ಪ್ರತಿಪಾದಿಸಲಾಗದು. ಜಂಗಮ ವೆಂಬುದು ನಿರಾಭಾರಿ ಅದು ಸಾಭಾರಿಯಾದುದಲ್ಲ. ನಿಸ್ಸಂಗತ್ವ ಅದರ ಲಕ್ಷಣ. 'ಇದ್ದೂ ಬದ್ಧನಾಗದೆ, ಸುಳಿದು ಸೂತಕಿ ಯಾಗದೆ, ಬೆಳಗುವಂಥ ವಿಶಿಷ್ಟ ರೀತಿ. ಗುರು ಜ್ಞಾನರೂಪಿ—ಯಾದರೆ; ಜಂಗಮ ಕ್ರಿಯಾರೂಪ ಬಸವಣ್ಣನವರು ಹೇಳುವಂತೆ ಗುರೂಪದೇಶಮಂತ್ರ ವೈದ್ಯ, ಜಂಗಮೋಪದೇಶ ಶಸ್ತ್ರ ವೈದ್ಯ, ಜಂಗಮ ಅಂಗಗುಣಗಳನ್ನು ಮೀರಿನಿಂತವನು. ಸಕಲ ಜೀವಿಗಳಿಗೆ ಲೇಸನ್ನೇ ಬಯಸುವ ದಯಾಸಾಗರ. ಸಮತಾಭಾವದ ರತ್ನಭಂಡಾರ. ಶಾಂತಿ ಸೈರಣೆಗಳ ಸಾಕಾರ. ಶರಣರ ದೃಷ್ಟಿಯಲ್ಲಿ ಜಂಗಮ ಲಿಂಗದ ಮುಖ. ಲಿಂಗ-ಜಂಗಮಗಳು ಅಭಿನ್ನ. ಮರದ ಬೇರು ಜಂಗಮ; ಹೂವುಲಿಂಗ. ಅದಕ್ಕೇ "ಮರಕ್ಕೆ ಬಾಯಿ ಬೇರೆಂದು ವಳಕ್ಕೆ ನೀರೆರೆದರೆ ಮೇಲೆ ಪಲ್ಲವಿಸಿತ್ತು ನೋಡಾ"—ಎಂದಿದ್ದಾರೆ ಬಸವಣ್ಣ. ಜಂಗಮ ಸಮಾಜದ ಅದರಲ್ಲೂ ಕ್ರಿಯಾವಂತ ಸಮಾಜದ ಪ್ರತಿರೂಪ. ಅದಕ್ಕೆಂದೇ ಗುರುವಿಗೆ ತನು, ಲಿಂಗಕ್ಕೆ ಮನ, ಜಂಗಮಕ್ಕೆ ಧನ ವನ್ನು ಕೊಡಬೇಕು ಎಂಬುದು ಶರಣರು ಜಂಗಮಕ್ಕೆ ನೀಡಿದ ಹಣ ಹರಿವನದಿಯಂತೆ ಹರಿದು ಬರುತ್ತದೆ ಮತ್ತೆ ಸಮಾಜಕ್ಕೆ.

'ಜಂಗಮ, ವೆಂಬುದು ವ್ಯಕ್ತಿ ಸಾಧಿಸ ಬಹುದಾದ ಸಿದ್ಧಿ. ಅದು ಜಾತಿ ಸೂಚಕವಲ್ಲ–ಜಾತಿಸೂಚಕವಾಗಿ ರೂಢಿಗೆ ಬಂದದ್ದು ದುರ್ದೈವ: ಅನು— ಭಾವದ ಔನ್ನತ್ಯದ ಸಂಕೇತವಾದ ಅದಕ್ಕೆ ಆನುವಂಶಿಕತೆಯನ್ನು ಆರೋಪಿಸಿದ್ದು ಅವಿಚಾರದ ಅವಿವೇಕ. ಹುಟ್ಟಲ್ಲ ಜಂಗಮ ನಿರ್ಣಯಕ್ಕೆ ಅಳತೆಗೋಲು, ಅರ್ಹತೆ ಅದರ ತೂಗುತಕ್ಕಡಿ. ಹುಟ್ಟೆ ಜಂಗಮದ ನಿರ್ಣಯ ವೆನ್ನುವುದಾದರೆ ವೀರಶೈವರ ಧರ್ಮದ ಮೂಲವನ್ನೇ ಮರೆತಂತಾ

ಗುತ್ತದೆ. ವರ್ಣಾಶ್ರಮಧರ್ಮದಂತಹ ಶ್ರೇಣೀಕೃತ ವ್ಯವಸ್ಥೆಯನ್ನು ವಿರೋಧಿಸಿದ ವೀರಶೈವ ಜಂಗಮಕ್ಕೆ ಹುಟ್ಟಿ ಕಾರಣವೆಂದರೆ ವಿರೋಧಾಭಾಸವಾಗುತ್ತದೆ. ಜಂಗಮ ಜಾತಿ ಸಂಕೇತವಲ್ಲ; ಆಧ್ಯಾತ್ಮಿಕ ಅನುಭಾವದ ನಿಲುವು.

"ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ" ಎಂಬಲ್ಲಿ ಜ್ಞಾನ ಪ್ರವರ್ತಕವಾದ, ಕ್ರಿಯಾ ಮುಖವಾದುದಕ್ಕೆ ನಾಶವಿಲ್ಲವೆಂದೇ ಅರ್ಥ ಅದು Time ಮತ್ತು Space ಗಳನ್ನು, ದೇಶ ಕಾಲಗಳನ್ನ ಗೆದ್ದು ನಿಂತದ್ದು. ಆದುದರಿಂದಲೇ ಜಂಗಮವ ನರಿಯ ದತನಕ ಲಿಂಗವರಿವಾಗದು. ಆದರಿಂದು 'ಷೋಡಶ ಕಳೆಯುಳ್ಳ ಜಂಗಮ'ರು, 'ವಿಷಯವುಳ್ಳ ಜಂಗಮ"ರು, "ರಸವಿದ್ಯೆಯುಳ್ಳ ಜಂಗಮ" ರು ವೇಷವುಳ್ಳ ಜಂಗಮ'ರು ಪೂಜಿಗೊಳ್ಳುತ್ತಿರುವುದು ಎತ್ತೆತ್ತ ನೋಡಿದರೂ ಕಾಣ ಬರುತ್ತಿದೆ. ಜ್ಞಾನವುಳ್ಳ ಜಂಗಮ ಆರಿಗೂ ಕಾಣಬಾರದು' – ಎಂಬತಾಗಿದೆ. ಮತ್ತು ಇಂಥ 'ಜಂಗಮವ ನಿಂದೆಮಾಡಿ ಲಿಂಗವ ಪೂಜಿಸುವ ಭಕ್ತ 'ರೂ ಕಾಣುತ್ತಿದ್ದಾರೆ. ಜಂಗಮ ಬೇಡು- ವುದಿಲ್ಲ, ಭಕ್ತ ಬೇಡಿಸಿಕೊಳ್ಳುವುದಿಲ್ಲ. ಜಂಗಮವೆ ಲಿಂಗವೆಂದು ನಂಬದ ತನಕ ಸಂದು ಸಂಶಯ ಳಿಯದತನಕ–ಲಿಂಗಾಂಗ ಸಾಮರಸ್ಯ ತಿಳಿಯ ಬಾರದು.

ದಿನಾಂಕ 29 ಜನವರಿ 1988 ರಂದು ಶ್ರೀ ಸಿದ್ಧಗಂಗಾ ಮಠದಲ್ಲಿ ಜಂಗಮ ದೀಕ್ಷಾ ಸಮಾರಂಭ ನಡೆಯಿತು. ಸಹಸ್ರಾರು ಭಕ್ತಾದಿಗಳ ಸಮ್ಮುಖದಲ್ಲಿ ಮೂವರು ವಟುಗಳಿಗೆ ಪೂರ್ವಾಶ್ರಮ ನಿರಸನಗೊಳಿಸಿ ವಿರಕ್ತಾಶ್ರಮವನ್ನು ಅನುಗ್ರಹಿಸುತ್ತ ಪರಮ ಪೂಜ್ಯ ಶ್ರೀ ಶ್ರೀ ಗಳು ಜಂಗಮ ನಿರಾಭಾರಿತ್ವವನ್ನು ಆಶೀರ್ವದಿಸಿದರು. ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು, ಪೂಜ್ಯ ಶ್ರೀ ಶ್ರೀ ಗಂಗಾಧರೇಶ್ವರ- ಸ್ವಾಮಿಗಳು, ಪೂಜ್ಯ ಶ್ರೀ ಶ್ರೀ ಮಹಾದೇವಸ್ವಾಮಿಗಳು ಜಂಗಮ ದೀಕ್ಷಾ ಬದ್ಧರಾಗಿ ಲೋಕ ಸೇವೆಗೆ ತಮ್ಮನ್ನು ಅರ್ಪಿಸಿಕೊಂಡುದು ಅವಿಸ್ಮರಣೀಯ.

ಗುರುವಿನ ಗುರು ಜಂಗಮವೆಂದಿತ್ತು ಕೂಡಲ ಸಂಗಯ್ಯನ ವಚನ.

---

ಹಾವಾಡಿಗನು ಮೂಕೊರತಿಯು ತನ್ನ ಕೈಯಲ್ಲಿ ಹಾವು ಮಗನ ಮದುವೆಗೆ
ಶಕುನವ ನೋಡ ಹೋದಾಗ,
ಇದಿರಲ್ಲೊಬ್ಬ ಮೂಕೊರತಿಯು ಹಾವಾಡಿಗನ ಕಂಡು
" ಶಕುನ ಹೊಲ್ಲೆ "ಂಬ ಚದುರನ ನೋಡಾ !
ತನ್ನಸತಿ ಮೂಕೊರತಿ! ತನ್ನ ಕೈಯಲ್ಲಿ ಹಾವು! ತಾನು ಮೂಕೊರೆಯು
ತನ್ನ ಭಿನ್ನವನರಿಯದೆ ಅನ್ಯರನೆಂಬ
ಕುನ್ನಿಯ ನೇನೆಂಬೆ ಕೂಡಲ ಸಂಗಮದೇವಾ
– ಬಸವಣ್ಣನವರು.

ಆರೋಗ್ಯ ರಹಸ್ಯ—೪

ಮಹಾತ್ಮ ಗಾಂಧಿ

## ಆಹಾರ

ಗಾಳಿ ನೀರು ಇಲ್ಲದೆ ಮನುಷ್ಯ ಬದುಕಲಾರ; ನಿಜ. ಆದರೆ ಈ ದೇಹವನ್ನು ಪೋಷಿಸುವುದು ಆಹಾರ. ಅದಕ್ಕೇ ಅನ್ನವೇ ಪ್ರಾಣ ಎಂಬ ಗಾದೆ ಬಂದಿರುವುದು.

ಆಹಾರ ಮೂರು ತೆರನಾಗಿಬಹುದು; ಶಾಕಾಹಾರ, ಮಾಂಸಾಹಾರ ಮಿಶ್ರಾಹಾರ. ಮಾಂಸಾಹಾರದಲ್ಲಿ ಕೋಳಿ, ಮೀನು ಸೇರಿವೆ. ಹಾಲೂ ಪ್ರಾಣಿಜನ್ಯ ಪದಾರ್ಥವೇ ಕಟ್ಟುನಿಟ್ಟಿನ ಶಾಕಾಹಾರದಲ್ಲಿ ಅದನ್ನು ಸೇರಿಸಲಾಗುವುದಿಲ್ಲ. ಅದು ಬಹಳ ಮಟ್ಟಿಗೆ ಮಾಂಸದ ಕೆಲಸವನ್ನೇ ಮಾಡುತ್ತದೆ. ವೈದ್ಯಕೀಯ ಭಾಷೆಯಲ್ಲಿ ಅದನ್ನು ಪ್ರಾಣಿ ಸಂಬಂಧದ ಆಹಾರವೆಂದೇ ಪರಿಗಣಿಸಿದ್ದಾರೆ. ಆದರೆ ಸಾಧಾರಣ ಮನುಷ್ಯ ಹಾಗೆ ತಿಳಿಯುವುದಿಲ್ಲ. ಮೊಟ್ಟೆಗಳನ್ನು ಮಾತ್ರ ಮಾಂಸಾಹಾರವೆಂದು ತಿಳಿಯುತ್ತಾನೆ. ನಿಜವಾಗಿ ಹಾಗಲ್ಲ. ಈಗಿನ ಕಾಲದಲ್ಲಿ ಗೊಡ್ಡು ಮೊಟ್ಟೆಗಳು ತಯಾರಾಗುತ್ತವೆ. ಹುಂಜವನ್ನೇ ನೋಡದೆಂಪಿ ಕೋಳಿ ಮೊಟ್ಟೆಯಿಡುತ್ತದೆ. ಗೊಡ್ಡು ಮೊಟ್ಟೆಗಳು ಮರಿಯಾಗುವುದಿಲ್ಲ. ಆದ್ದರಿಂದ ಹಾಲು ಕುಡಿಯುವವರು ಇಂಥ ಮೊಟ್ಟೆ ತಿನ್ನಲು ಆಕ್ಷೇಪಿಸಬಾರದು.

ಮನುಷ್ಯ ಶಾಕಾಹಾರಿಯಾಗಿರಬೇಕು ಎನ್ನಲು, ಅಂಗವಿಜ್ಞಾನ, ಶರೀರಶಾಸ್ತ್ರಗಳ ಆಧಾರ ಬೇಕಾದಷ್ಟಿದೆ ಎನ್ನುವ ದೃಢಾಭಿಪ್ರಾಯ ಹೆಚ್ಚಾಗಿ ಬೆಳೆದಿದ್ದರೂ, ವೈದ್ಯಕೀಯ ಅಭಿಪ್ರಾಯವೇನೋ ಮಿಶ್ರಾಹಾರದ ಪರವಾಗಿಯೇ ಇದೆ. ಮನುಷ್ಯನ ಹಲ್ಲು, ಹೊಟ್ಟೆ, ಕರುಳು ಇತ್ಯಾದಿ ಗಳೆಲ್ಲ, ಮನುಷ್ಯನನ್ನು ಶಾಕಾಹಾರಿಯಾಗಬೇಕೆಂದೇ ನಿಸರ್ಗ ರಚಿಸಿದೆ ಎನ್ನುವುದನ್ನು ಸಮರ್ಥಿಸುತ್ತವೆ,

ಶಾಕಾಹಾರದಲ್ಲಿ ಧಾನ್ಯ, ಬೇಳೆ, ಬಾಯಿಗೆ ರುಚಿಯಾದ (ಕಂದ ಮೂಲ ಫಲ) ಬೇರು, ಗೆಡ್ಡೆ, ಸೊಪ್ಪು ಇವೇ ಅಲ್ಲದೆ, ಹೊಸದೂ ಒಣಗಿಸಿಟ್ಟದ್ದೂ ಹಣ್ಣುಗಳೂ ಸೇರಿವೆ. ಒಣ ಹಣ್ಣುಗಳಲ್ಲಿ ಬಾದಾಮಿ, ಪಿಸಾ ಬೀಜ, ಅಕ್ರೋಡ ಇತ್ಯಾದಿ ಬೀಜಗಳೂ ಉಂಟು.

ನಾನು ಯಾವಾಗಲೂ ಪೂರ್ಣ ಶಾಕಾಹಾರ ವಾದಿ. ಆದರೆ, ಸಂಪೂರ್ಣ ಆರೋಗ್ಯಕ್ಕೆ ಶಾಕಾಹಾರದಲ್ಲಿ ಹಾಲು, ಮೊಸರು, ಬೆಣ್ಣೆ ತುಪ್ಪ ಇರಲೇಬೇಕೆಂದು ನನ್ನ ಅನುಭವ ನನಗೆ ತೋರಿಸಿಕೊಟ್ಟದೆ. ನನ್ನ ಮೂಲ ಭಾವನೆಗೆ ಇದು ಬಹಳ ಮುಖ್ಯ ವ್ಯತ್ಯಾಸ. ಆರು ವರ್ಷಗಳ ಕಾಲ ನಾನು ಆಹಾರದಲ್ಲಿ ಹಾಲನ್ನು ಬಳಸಲಿಲ್ಲ. ಆಗ

ಆದರಿಂದ ನನಗೇನೂ ಕೆಡುಕಾಗಿ ಕಾಣಲಿಲ್ಲ. ಆದರೆ ೧೯೧೮ ರಲ್ಲಿ ನನ್ನ ಅಜಾ
ದಿಂದಲೇ, ನನಗೆ ಬಲವಾದ ಆಮಶಂಕೆಯಾಯಿತು. ಬರೀ ಅಸ್ಥಿಪಂಜರವಾಗಿ ಹೋ
ಆದರೂ ಯಾವ ಔಷಧಿಯನ್ನೂ ನಾನು ತೆಗೆದುಕೊಳ್ಳಲಿಲ್ಲ, ತೀವ್ರವಾಗಿ ನಿರಾಕರಿಸಿ
ಅಷ್ಟೇ ದೃಢವಾಗಿ ಹಾಲು ಮಜ್ಜಿಗೆಯ ಸೇವನೆಯನ್ನೂ ವಿರೋಧಿಸಿದೆ. ನ
ಶರೀರ ಪುಷ್ಟಿಗೊಳ್ಳಲಿಲ್ಲ, ಹಾಸಿಗೆ ಬಿಟ್ಟು ಏಳುವಷ್ಟು ಶಕ್ತಿಯೂ ಬರಲಿಲ್ಲ. ಆದ
ಮೊದಲೇ ಹಾಲು ಕುಡಿಯಬಾರದೆಂಬ ವ್ರತ ತೊಟ್ಟಿದ್ದೆ. ಆ ವ್ರತ ಹಿಡಿದಾಗ ಹಸು
ಅಥವಾ ಎಮ್ಮೆಯ ಹಾಲನ್ನು ತಾನೆ ಬಿಟ್ಟಿದ್ದು ? ಮೇಕೆಯ ಹಾಲನ್ನು ತೆಗೆದುಕೊಳ್ಳ
ಆ ವ್ರತದ್ದೇನು ? ಅಡ್ಡಿ ಎಂದು ಒಬ್ಬ ವೈದ್ಯಮಿತ್ರ ಸೂಚಿಸಿದ. ನನ್ನ ಹೆಂಡತಿ ಅವ
ಬೆಂಬಲವತ್ತಳು. ನಾನು ಸಡಿಲಬಿಟ್ಟೆ. ನಿಜವಾಗಿಯೂ ಹಾಲನ್ನು ಬಿಟ್ಟವನಿಗೆ, ವ್ರ
ಹಿಡಿವಾಗ ಹಸುವಿನ, ಎಮ್ಮೆಯ ಹಾಲು ಮಾತ್ರವೇ ಮನಸ್ಸಿನಲ್ಲಿದ್ದರೂ ಎಲ್ಲಾ ಹಾಲ
ನಿಷಿದ್ಧವೇ. ಎಲ್ಲಾ ಪ್ರಾಣಿಗಳ ಹಾಲೂ ಒಂದೇ. ಅವುಗಳಲ್ಲಿ ವಿವಿಧ ಅಂಶಗಳ ಪ್ರಮಾ
ಹೆಚ್ಚು ಕಡಿಮೆಯಿರಬಹುದು, ಅಷ್ಟೇ ಆದ್ದರಿಂದ ನಾನು ನನ್ನ ವ್ರತವನ್ನು ಕೇವ
ಅಕ್ಷರಶಃ ಪಾಲಿಸಿದೆನೇ ವಿನಾ, ತತ್ವಶಃ ಅಲ್ಲ ಎನ್ನಬಹುದು. ಅದು ಹೇಗೋ ಅಂತೂ
ಕೂಡಲೆ ಮೇಕೆಯ ಹಾಲನ್ನು ತಂದರು. ನಾನೂ ಕುಡಿದೆ. ನನಗೆ ಆದರಿಂದ ಹೊ
ಜೀವ ಬಂದಂತಾಯಿತು. ಬೇಗ ಚೇತರಿಸಿಕೊಂಡೆ. ತ್ವರೆಯಾಗಿ ಹಾಸಿಗೆ ಬಿಟ್ಟೇ
ವಷ್ಟು ಶಕ್ತನಾದೆ. ಇದರಿಂದಲೂ ಇಂಥ ಅನೇಕ ಅನುಭವಗಳಿಂದಲೂ ಪೂರ
ಶಾಕಾಹಾರದಲ್ಲಿ ಹಾಲನ್ನು ಸೇರಿಸಬೇಕು ನಾನು ಒಪ್ಪಿ ಕೊಳ್ಳುವಂತಾಗಿದೆ. ಆದರ
ಈ ಹಾಲು, ಮಾಂಸಗಳಿಂದ ನಮಗೆ ಸಿಗುವ ಎಲಾ ಆಗತ್ಯ ವಸ್ತುಗಳನ್ನೂ ಒದ
ಸುವಂಥ ಯಾವುದೋ ಒಂದು ಪದಾರ್ಥ ವಿಶಾಲ ಸಸ್ಯ ಸಾಮ್ರಾಜ್ಯದಲ್ಲಿ ಇರಲೇಬೇಕ
ಅದರಲ್ಲಿ ಹಾಲು ಮಾಂಸಗಳ ನ್ಯೂನತೆಗಳು-ನೈತಿಕ ಹಾಗೂ ಇತರ - ಇಲ್ಲದೆ ಇರಬೇಕ
ಎಂದು ನನ್ನ ಖಚಿತವಾದ ಭಾವನೆ.

(ಮುಂದುವರಿಯುತ್ತ

---

ಅಯ್ಯಾ, ನೀ ಮಾಡಲಾರದ ಜಗತ್ತು, ಅಯ್ಯಾ ನೀ ಮಾಡಲಾರದ ಸಂಸಾ
ಅಯ್ಯಾ, ನೀ ಮಾಡಲಾರದ ಮರನೆ, ಅಯ್ಯಾ ನೀ ಮಾಡಲಾರದ ದುಃಖ
ಅಯ್ಯಾ, ನೀ ಬಿಡಿಸಿದಡೆ ಬಿಟ್ಟಿತ್ತು ತಾಮಸವಯ್ಯಾ,
ನಾನೀ ಮಾಯೆಯ ಗೆದ್ದನೆಂಬ ಹಮ್ಮಿದೇಕೆ ಕೂಡಲಸಂಗನ

—ಬಸವಣ್ಣನವರು

# ಸಿದ್ಧಗಂಗಾ ವಾರ್ತೆ

## ಪವಿತ್ರ ಸಮಾರಂಭ

ಓಂಕಾರ್.

ದಿನಾಂಕ 29 . 1 . 88 ರಂದು ಶ್ರೀ ಸಿದ್ಧಗಂಗಾ ಮಠದಲ್ಲಿ ಒಂದು ಪವಿತ್ರ ಸಮಾರಂಭ. ಮೂವರು ಪೂರ್ವಾ ಶ್ರಮವನ್ನು ತ್ಯಜಿಸಿ ವಿರಕ್ತಾಶ್ರಮ ಸ್ವೀಕಾರ ಸಮಾರಂಭ. ಪರಮ ಪೂಜ್ಯ ಶ್ರೀ ಮ । ನಿ ॥ ಪ್ರ ॥ ಡಾ ॥ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳಿಂದ ದೀಕ್ಷೆ ಸ್ವೀಕರಿಸಿದ ವಿರಕ್ತ ಸನ್ಯಾಸಿಗಳನ್ನು ಭಕ್ತಾದಿಗಳಿಗೆ ಪರಿಚಯಿಸುವ ಸಂದರ್ಭ . ನೂತನ ಶ್ರೀ ಶ್ರೀಗಳ ಆಶ್ರಮ ಸ್ವೀಕಾರ ಭಾಷಣ-ಭರವಸೆ ನೀಡುವ ಮಂಗಳ ಸಮಯ. ಅನೇಕ ಮಠಾಧೀಶರುಗಳು ಈ ಪುಣ್ಯ ಸಮಾರಂಭಕ್ಕೆ ದಯಮಾಡಿಸಿದ್ದರು. ನವ ಉತ್ಸಾಹದ ವಾತಾವರಣ ಈ ವಿಶೇಷ ಸಭೆ ಸೇರಿದ್ದುದು ಹಳೆಯ ಮಠದಲ್ಲಿ. ವಿದ್ವಾನ್ ಸಿ.ಎಸ್. ಸಿದ್ದಲಿಂಗಯ್ಯನವರಿಂದ ಪ್ರಾರ್ಥನೆ ಸ್ವಾಗತ ಕೋರಿದವರು ಶ್ರೀ ಮಠದ ವಿಶೇಷಾಧಿಕಾರಿ ನಿವೃತ್ತ ಪ್ರಾಚಾರ್ಯ ಶ್ರೀ ಕೆ.ಎಂ ರೇವಣಸಿದ್ದಯ್ಯನವರು.

ಮೊದಲಿಗೆ ಮಾತನಾಡಿದ ಬೆಂಗಳೂರು ಬೇಲಿ ಮಠಾಧೀಶರಾದ ಶ್ರೀ ಶಿವರುದ್ರ ಸ್ವಾಮಿಗಳು ಗುರುಪದವಿಯ ಕಡು ಕಷ್ಟದೆಸೆಯನ್ನು ನೂತನ ಶ್ರೀ ಶ್ರೀಗಳಿಗೆ ತಿಳಿಸಿದರು. ಅದು ಗರಗಸದಂತೆ ಹೋಗುತ್ತಾ, ಬರುತ್ತಾ ಕೊಯ್ಯುವುದು. ನಿರಂತರ ಎಚ್ಚರಿಕೆಯುಳ್ಳವನಿಗೆ ಮಾತ್ರ ಅದು ದಕ್ಕ ತಕ್ಕದ್ದು ಎಂದರು. ಶ್ರೀ ಮ॥ನಿ॥ಪ॥ಡಾ॥ ಶ್ರೀ ಶ್ರೀ ಶಿವಕುಮಾರ ಸ್ವಾಮಿಜಿಯವರು ಸಮಾಜದ ಸೇವೆಯೇ ಶಿವಪೂಜೆಯೆಂದು ಭಾವಿಸಿ 50 ವರ್ಷಕ್ಕೂ ಮಿಗಿಲು ದುಡಿದಿರುವುದನ್ನು ನಾವು ಸ್ಮರಿಸಬೇಕಾಗಿದೆ. ಪಂಚಬ್ರಹ್ಮೋತ್ಸವ ಸಂದರ್ಭದಲ್ಲಿ ಬಂದಜಂಗಮರನ್ನು ಮೇಲುಮಾಡಿ,ತಾವು ನಡೆದು ಬರುತ್ತಾರೆ. ಆ ಪುಣ್ಯಾತ್ಮರು "ಏರಿಸಿದ ಎತ್ತರಕ್ಕೆಅರಳುವ ಕೈವಾರಿಗಳಾಗ ಬೇಕು ಈ ದೀಕ್ಷಾಬದ್ಧರು ಎಂದು ಹೇಳಿ," ನೂತನ ಶ್ರೀ ಶ್ರೀಗಳು ಗುರುಗಳ ಅನುಗ್ರಹದಿಂದ ಅರಳಿ ಪರಿಪೂರ್ಣತೆ ಪಡೆಯಲು ಯತ್ನಿಸಬೇಕೆಂದು ಆಶಿಸಿದರು.

ದೇಗುಲ ಮಠಾಧೀಶರಾದ ಶ್ರೀ ಮುಮ್ಮಡಿ ನಿರ್ವಾಣಸ್ವಾಮಿಗಳು ಮಾತನಾಡುತ್ತಾ ತಮ್ಮ ಪೂಜ್ಯ ಗುರುಗಳು ಶ್ರೀ ಸಿದ್ಧಗಂಗಾ ಕ್ಷೇತ್ರದ ಹಿರಿಮೆಯನ್ನು ಒತ್ತಿ ಒತ್ತಿ ಹೇಳುತ್ತಿದ್ದರೆಂದು ಹೇಳಿ, ಇಲ್ಲಿ ಗುರುಗಳಾದವರು ಕಾಯಕ ನಿಷ್ಠೆ-ಕಾರ್ಯತತ್ಪರತೆಯಲ್ಲಿ ಉನ್ನತಮಟದಲ್ಲಿದ್ದದ್ದರಿಂದ ಶ್ರೀ ಮಠವು ಇಷ್ಟರ ಮಟ್ಟಗೆ ಬೆಳೆದಿದೆ ಎಂದು ಹೇಳಿದರು. ಲಾರಿಯಿಂದ ಮೂಟೆ ಹೊತ್ತು ಉಗ್ರಾಣಕ್ಕೆ ಹಾಕುತ್ತಿದ್ದರು. ಶ್ರೀ ಶ್ರೀಗಳ ಶ್ರಮ, ತಪಸ್ಸು, ಪೂಜಾನಿಷ್ಠೆ ಎಲ್ಲರಿಗೂ ಮೇಲ್ಪಂಕ್ತಿಯಾಗಿದೆ ಎಂದು ಹೇಳಿದರು.

ಮುರಳೀಗವಿ ಮಠದ ಶ್ರೀ ಕಾಲಾಗ್ನಿರುದ್ರ ಸ್ವಾಮಿಗಳು ಮಾತನಾಡಿ ಕನಸುಕಂಡದ್ದು ಈಗ ನೆನಸಾಗಿ ಕಾಣುತ್ತಿದೆ. ಕೀಟ ಭ್ರಮರ ನ್ಯಾಯದಂತೆ ಈ ನೂತನ ಸ್ವಾಮಿಗಳು ಗುರುವಿನ ಸೇವೆ ಮಾಡಿ ಅವರ ಅನುಗ್ರಹದಿಂದ ಉದ್ಧಾರವಾಗಿ, ಸಮಾಜ ಸೇವೆಯ ಜೊತೆಗೆ ಆಧ್ಯಾತ್ಮಿಕ ಶಕ್ತಿ ಬೆಳಸಿಕೊಂಡು ಭಕ್ತರನ್ನು ಉದ್ಧಾರ ಮಾಡುವಂತಾಗಲಿ ಎಂದು ಹಾರೈಸಿದರು.

ಬೆಂಗಳೂರಿನ ಹೈಕೋರ್ಟ್‌ವಕೀಲರಾದ ಶ್ರೀ ವೀರಭದ್ರಪ್ಪನವರು ಮಾತನಾಡಿ ಜಂಗಮ ದೀಕ್ಷೆಯೆಂದರೆ ಶಿಲ್ಪಿಯಿಂದ ಆರಿಸಲ್ಪಟ್ಟ ಕಲ್ಲಿನಂತೆ. ಇನ್ನು ಅವರುಗಳು ತಮ್ಮ ಪ್ರಯತ್ನದಿಂದ ಸೇವೆ ಮಾಡಿ ಮೂರ್ತಿಗಳಾಗಬೇಕು ಎಂದರು. ಕಾವಿಯನ್ನು ಏಕೆ ಧರಿಸಬೇಕು ? ಎಂಬ ಪ್ರಶ್ನೆಯನ್ನು ಹಾಕಿ ಅವರೇ ಉತ್ತರಿಸುತ್ತ 'ಕ, ಎಂದರೆ ಕರ್ಮನಾಶ 'ವಿ, ಎಂದರೆ ವಿಷಕರ್ಮವರ್ಜಿತ ಎಂದುಹೇಳಿ ಸ್ವಾಮಿಗಳಾದವರು ಐಹಿಕ ಭೋಗ ತ್ಯಾಜ್ಯಮಾಡಿ ಭಕ್ತರ ಉದ್ಧಾರಕ್ಕೆ ಲೋಕಸೇವೆಗೆ ತಮ್ಮ ಬಾಳನ್ನು ನೆಡೆಸ ಬೇಕೆಂದು ಹೇಳಿದರು.

ಶ್ರೀ ಸಿದ್ಧಗಂಗಾ ತಾಂತ್ರಿಕ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಪರಮೇಶ್ವರಪ್ಪನವರು ಮಾತನಾಡಿ ಸತ್ಯಕ್ಕೆ, ಪರಿಶುದ್ಧತೆಗೆ ಈ ಕಾಲದಲ್ಲಿ ಗೌರವ ಕಡಿಮೆ ಯಾಗುತ್ತಿರು ವುದಕ್ಕೆ ತಮ್ಮ ಖೇದವನ್ನು ವ್ಯಕ್ತಪಡಿಸಿದರು. ಮುಂದುವರೆದು ಮಾತನಾಡುತ್ತಾ ಸ್ವಾರ್ಥತೆಯಿಂದ ಅಯೋಗ್ಯರಿಗೆ, ಸಾಧನೆ ಸಿದ್ಧಿಯಿಲ್ಲದಿರುವವರಿಗೆ ಗೌರವ ಕೊಟ್ಟರೆ ಸಮಾಜ ನಾಶವಾಗುತ್ತದೆ ಎಂದು ಎಚ್ಚರಿಸಿದರು. ಜನ ದುಷ್ಟ ಶಕ್ತಿಗೆ ಗೌರವ ಕೊಡುತ್ತಿ ದ್ದಾರೆ, ಒಳ್ಳೆಯವರು ಕುಗ್ಗಿ ಕುಳಿತಿದ್ದಾರೆ. ಎಂದು ಹೇಳಿದ ಪ್ರಾಚಾರ್ಯರು ಈ ಮಠದ ಕೀರ್ತಿನೂರ್ಮಡಿ ಬೆಳೆಯಬೇಕಾದರೆ ಪತಿವ್ರತೆಯ ಅಪರಾವತಾರದಂತೆ ಸ್ವಾಮಿಗಳಾದರು ಬೆಳೆಯಬೇಕು ಎಂದು ಹೇಳಿದರು

ವಿಧಾನ ಪರಿಷತ್ತಿನ ಮಾಜೀಸದಸ್ಯ ಶ್ರೀ ಎ.ಎಸ್. ನಂದೀಶ್ ರವರು ಮಾತನಾಡಿ ನೂತನ ಶ್ರೀ ಶ್ರೀಗಳ ಕಡೆಗೆ ತಿರುಗಿ ಒಳ್ಳೆ ಹಾದಿಯಲ್ಲಿ ನಡೆಯಿರಿ—ಸಮಾಜವನ್ನು ಮುನ್ನೆಡೆಸಿರಿ, ದೊಡ್ಡವರ ಹಾದಿಯಲ್ಲಿ ನಡೆದು ಸಮಾಜಕ್ಕೆ ಒಳ್ಳೆಯದನ್ನು ಮಾಡಿರಿ ಎಂದು ಭಿನ್ನವಿಸಿ ಕೊಂಡರು.

ಕ್ಯಾತ್ಸಂದ್ರದ ಮಂಡಲ ಪ್ರಧಾನರಾದ ಶ್ರೀ ಆನಂದ ರವರು ಇಂತಹ ಒಳ್ಳೆಯ ಕಾರ್ಯವಾದುದಕ್ಕೆ(ವಿರಕ್ತಾಶ್ರಮ ಸ್ವೀಕಾರ ಮಾಡಿದಕಾರ್ಯ) ತಮಗೆ ಭಾರಿ ಸಂತೋಷ ವಾಗಿದೆ ಎಂದರು.

ತುಮಕೂರಿನ ಗಣ್ಯವಕೀಲರಾದ ಶ್ರೀ ಕೆ. ಎನ್. ರಾಜಶೇಖರ್ ರವರು ಮಾತನಾಡಿ ನಾವು ನಿಮ್ಮ ಕಾಲಿಗೆ ನಮಸ್ಕಾರಮಾಡುವಂತೆ ಬಾಳಿರಿ ಎಂದು ನೂತನ ಶ್ರೀ ಶ್ರೀಗಳನ್ನು ಕೇಳಿಕೊಂಡರು.

ಬೆಂಗಳೂರು ಜಿಲ್ಲಾ ಪರಿಷತ್ತಿನ ಸದಸ್ಯರಾದ ಶ್ರೀ ರೇವಣ್ಣನವರು ಮಾತನಾಡಿ ಬಸವಣ್ಣನವರ ಆದರ್ಶಗಳನ್ನು ಅವರ ತತ್ವನಿಷ್ಠೆಯನ್ನು ಪಾಲಿಸಿ ಮೇಲ್ಪಂಕ್ತಿಯಾಗಿ ಬಾಳಿರಿ ಎಂದು ಹೇಳಿದರು.

ತುಮಕೂರಿನ ಗಣ್ಯ ವರ್ತಕರಾದ ಶ್ರೀ ಸಿ. ಎಲ್ ಶಿವಣ್ಣನವರು ಮಾತನಾಡಿ ಪೀಠಾ ಧಿಕಾರದ ಮೂಲಕ ಜವಾಬ್ದಾರಿ ಹೊರಿಸಿದ್ದಾರೆ. ಶ್ರೀ ಶ್ರೀಗಳು ಅದು ಮುಳ್ಳಿನ ಹಾಸಿಗೆ. ಹಿಂದಿನ ಸಂದರ್ಭದಲ್ಲಿ ನಡೆದದ್ದನ್ನು ನೆನಸಿ ಎಚ್ಚೆತ್ತು ಸರಿಯಾಗಿ ಮುನ್ನಡೆ ಯಿರಿ ಎಂಬ ಮಾತನ್ನು ಆಡಿದರು.

ಅನೇಕ ಮಠಾಧೀಶರುಗಳು ಭಕ್ತ ವೃಂದದವರ ಭಾಷಣಗಳ ನಂತರ ನೂತನ ಸ್ವಾಮಿಗಳಾದ ಶ್ರೀ ಸಿದ್ಧಲಿಂಗಸ್ವಾಮಿಗಳ ಚರಪಟ್ಟಾಧಿಕಾರ ಸಂಪುಟವನ್ನು ಬೇಲಿಮಠ ದ ಶ್ರೀ ಶಿವರುದ್ರ ಸ್ವಾಮಿಗಳು ಶ್ರೀ ಮಹದೇವಸ್ವಾಮಿಗಳ ಸಂಪುಟವನ್ನು ಕನಕಪುರದ ದೇಗುಲ ಮಠದ ಶ್ರೀ ಮುಮ್ಮಡಿ ನಿರ್ವಾಣಸ್ವಾಮಿಗಳು ಶ್ರೀ ಗಂಗಾಧರಸ್ವಾಮಿಗಳ ಸಂಪುಟವನ್ನು ಕಂಚುಕಲ್ಲು ಮಠದ ಶ್ರೀ ಶಿವರುದ್ರ ಸ್ವಾಮಿಗಳು ಪಠಿಸಿದರು.

ಭಕ್ತಾದಿಗಳಿಂದ ನೂತನ ಶ್ರೀ ಶ್ರೀ ಗಳವರೆಲ್ಲರಿಗೆ ಹಾರ ಸಮರ್ಪಣೆಯಾಯಿತು.

ಮೂವರು ಸ್ವಾಮಿಗಳೂ ಸಹ ಏಕನಿಷ್ಠೆಯಿಂದ ದುಡಿದು ಎಚ್ಚರದ ಬದುಕಿನಲ್ಲಿ ಜೀವಿಸುತ್ತೇವೆಂಬ ಭರವಸೆಯನ್ನು ನೀಡಿ ಸಮಾಜದ ಬೆಂಬಲವನ್ನು ಕೋರಿದರು.

ಅಧ್ಯಕ್ಷತೆ ವಹಿಸಿದ್ದ ಪರಮಪೂಜ್ಯ ನಿ||ಪ್ರ||ಸ್ವ|| ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ತಮ್ಮ ಆಶೀರ್ವಾದ ಭಾಷಣದಲ್ಲಿ 'ನಾಡಿನ ಜೀವನ ಬಹಳ ಕೆಟ್ಟ ಮಟ್ಟವನ್ನು ಮುಟ್ಟಿದೆ. ತತ್ವ ನಿಷ್ಠ ಜನಾಂಗ ನಮ್ಮದು. ಆದರೆ ಸ್ವಾರ್ಥಿಗಳ ತಂಡ ತಮ್ಮ ಪ್ರಭಾವ ಬೀರುತ್ತಿದ್ದಾರೆ ಅವರದೇ ಮಾತು ಲೂಟಿ ನಡೆದಿದೆ. ಈ ಅಮಂಗಲ ವಾತವರಣವನ್ನು ನಾಶಮಾಡುವ ಶಕ್ತಿ ಸಂಪನ್ನರು ಯಾರು ? ಎಂದು ಪ್ರಶ್ನಿಸಿ ಈಗ ಆತ್ಮ ಸಂಪತ್ತನ್ನು ಬೆಳೆಸಿಕೊಂಡವರು ಯೋಗ್ಯಮಾರ್ಗದರ್ಶನ ಮಾಡಬೇಕಾಗಿದೆ ಎಂದರು.

ವೀರಶೈವ ಮಠಗಳು ಜನತಾ ಸೇವೆಗೆ ತಮನ್ನು ಅರ್ಪಿಸಿಕೊಂಡಿವೆ ಎಂದು ಹೇಳಿದ ಶ್ರೀ ಗಳು ಈ ದಿನ ಮೂರುಮಂದಿ ವಿರಕ್ತಾಶ್ರಮ ಸ್ವೀಕರಿಸಿದ್ದಾರೆ. ಇದು ಸಾಮಾನ್ಯ ಸ್ಥಾನವಲ್ಲ. ಅವರುಗಳು ತಮ್ಮ ಸ್ಥಾನದ ಪಾವಿತ್ರ್ಯವನ್ನು ಉಳಿಸಿಕೊಳ್ಳಬೇಕು. ನಿರಂತರ ಸಾಧನೆ ಸದ್ಭಾವದಿಂದ ಅವರು ಬೆಳೆಯಬೇಕೆಂಬ ಆಶಯವನ್ನು ವ್ಯಕ್ತ ಪಡಿಸಿದರು.

ಮುಂದುವರಿದು ಮಾತನಾಡುತ್ತಾ "ನೂತನ ಸ್ವಾಮಿಗಳು 1) ಪೂರ್ವಾಶ್ರಮದ ಬಂಧುತ್ವ ಬಿಡಬೇಕು 2) ಹೊನ್ನು ಹೆಣ್ಣುಗಳನ್ನು ಗೆಲ್ಲಬೇಕು 3) ಪ್ರಸಾದ ವಿಷಯ ದಲ್ಲಿ ನಿಯಮ ಪಾಲನೆ ಮಾಡಬೇಕು 4)ಸತ್ಪುರುಷರ ಸಹವಾಸ ಮಾಡಬೇಕು ಎಂದು

ನೂತನ ಸ್ವಾಮಿಗಳಾದವರಿಗೆ ತಿಳಿವಳಿಕೆ ಹೇಳಿದರು. ವಿರಕ್ತಾಶ್ರಮ ಕಠಿಣವಾದ ಆಶ್ರಮವಾಗಿದೆ. ಹೊಸಸ್ವಾಮಿಗಳು ಈ ಬಗ್ಗೆ ತೇರ್ಗಡೆಯಾಗುವ ಭರವಸೆ ನೀಡಿದ್ದಾರೆ. ಅವರುಗಳು ಸಾಧನೆಮಾಡಿ ಆದರ್ಶಗುರುಗಳಾಗಿ ಸಮಾಜಕ್ಕೆ ಸೇವೆಸಲ್ಲಿಸುವಂತಾಗಲಿ ಎಂದು ಆಶೀರ್ವದಿಸಿದರು.

ಹೊಸ ಸ್ವಾಮಿಗಳು ಕಳಂಕ ಬಾರದಂತೆ ದಿನವಹಿ ಎಚ್ಚರಿಕೆ ವಹಿಸಬೇಕೆಂದು ಹೇಳಿದ ಹಿರಿಯ ಶ್ರೀ ಶ್ರೀ ಗಳು ಮುಂದುವರೆದು ಶ್ರೀ ಗಳಾದವರು ಯೋಗಾಭ್ಯಾಸ ಮಾಡಬೇಕು. ಮಹಾನುಭಾವರ ಜೀವನ ಅರ್ಥಮಾಡಿಕೊಳ್ಳಬೇಕೆಂದು ಹೇಳಿದರು. ಸ್ವಾಮಿಗಳು ಕೇವಲ ವ್ಯವಹಾರಿಕ ಜೀವನದಲ್ಲೇ ಮುಳುಗಬಾರದು. ತಮ್ಮ ಪೂಜಾ ನಿಷ್ಠೆ, ಆತ್ಮೀಯ ಸಂಪತ್ತನ್ನು ಬೆಳಸಿಕೊಳ್ಳಬೇಕು. ತಪಶಕ್ತಿ ಬೆಳಸಿಕೊಂಡು ಆ ಶಕ್ತಿಯನ್ನು ಸಮಾಜಕ್ಕೆ ಧಾರೆಯೆರೆಯಬೇಕೆಂದರು. ಈ ಕ್ಷೇತ್ರವು ಕಾಯಕ – ದಾಸೋಹಕ್ಕೆ ಮಹತ್ವ ಕೊಟ್ಟಿದೆ. ಶ್ರೀ ಸಿದ್ಧಲಿಂಗೇಶ್ವರರ ಅನುಷ್ಠಾನ, ಶ್ರೀ ಅಟವಿ ಸ್ವಾಮಿಗಳು ತಪಸ್ಸು ಮಾಡಿರುವ ಪವಿತ್ರ ಸ್ಥಾನವೆಂದು ಹೇಳಿದರು. ಹೊಸ ಸ್ವಾಮಿಗಳು ಆತ್ಮೋದ್ಧಾರದಿಂದ ಸಮಾಜೋದ್ಧಾರಕ್ಕೆ ಶ್ರಮಿಸಬೇಕೆಂಬ ಕರೆಯನ್ನು ನೀಡಿದರು.

ಶ್ರೀ ಕೆ. ಎಸ್. ಶಂಕರಯ್ಯನವರಿಂದ ವಂದನಾರ್ಪಣೆ ಯಾಯಿತು.

ಅನೇಕ ದಿನ - ತಿಂಗಳು - ವರ್ಷಗಳಿಂದ ಬೇಗುದಿಯಲ್ಲಿದ್ದ ಭಕ್ತರಿಗೆ ಈ ಸಮಾರಂಭವು ಪರಿಮಳ ಪೂರಿತ ತಂಗಾಳಿ ಬೀಸಿದಂತಾಯಿತು. ಶ್ರೀ ಮಠದ ಸದ್ಭಕ್ತರಿಗೆ ಇದೊಂದು ಸ್ಮರಣೀಯ ದಿನವಾಯಿತು.

---

## " ಸಿದ್ಧಗಂಗಾ " ಸೇವೆಗೆ ಮತ್ತೊಂದು ಹೆಸರು

ಅದು ನಿಮ್ಮ ಸಹಕಾರದ ಪ್ರತಿ ರೂಪ. ಅದರ ಯಶಸ್ಸು ನಿಮ್ಮದು.

**'ಸಿದ್ಧಗಂಗಾ' ಮಾಸಿಕಕ್ಕೆ ತಾವೂ ಆಜೀವ ಸದಸ್ಯರಾಗಬಹುದು.**

**ಆ ಪುಣ್ಯ ನಿಮ್ಮದಾಗಲಿ. ಇದು ನಮ್ಮ ವಿನಮ್ರ ವಿನಂತಿ.**

ನೀವು ಮಾಡಬೇಕಾದುದಿಷ್ಟೆ

ಕೇವಲ ಎರಡುನೂರು ಒಂದು ರೂಗಳನ್ನು ನೀಡಿದರೆ ಸಾಕು. ಪ್ರತಿ ತಿಂಗಳೂ
'ಸಿದ್ಧಗಂಗಾ' ನಿಮ್ಮ ಮನೆಯ ಬಾಗಿಲಿಗೆ ಧಾವಿಸುತ್ತದೆ.
ನಿಮ್ಮ ಮನದ ಭಾವನೆಗಳಿಗೆ, ಆಲೋಚನೆಗಳಿಗೆ, ರೂಪ ಕೊಡಲು
ಸಿದ್ಧಗಂಗಾ ಸಿದ್ಧವಾಗಿದೆ, ಸಹಕರಿಸಿ, ಮುನ್ನಡೆಸಿ, ಇದು ನಿವೇದನೆ.

(ಮುಂದುವರೆದಿದೆ)

# ಶಿಕ್ಷಣ ತಜ್ಞರು ಮತ್ತು ಶೈಕ್ಷಣಿಕ ವಿಚಾರಗಳು-೧

-ಶ್ರೀ ಹೆಚ್. ಮಹಲಿಂಗಪ್ಪ ಎಂ.ಎ, ಬಿ.ಇಡಿ,
ಅಧ್ಯಾಪಕರು, ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯ, ತುಮಕೂರು.

## ರೂಸೋವಿನ ನಿಷೇಧಾತ್ಮಕ ಶಿಕ್ಷಣದ ಕಲ್ಪನೆ

ಮಕ್ಕಳ ಮನಸ್ಸು ಮತ್ತು ವ್ಯಕ್ತಿತ್ವಗಳನ್ನು ಬೆಳಸುವ ಗುರಿ ಇಲ್ಲದ ಕೇವಲ ದೈಹಿಕ ಶಿಕ್ಷಣ ಮತ್ತು ಇಂದ್ರಿಯಗಳಿಗೆ, ತರಬೇತಿ ನೀಡುವ ಶಿಕ್ಷಣವನ್ನು ನೀಷೇಧಾತ್ಮಕ ಶಿಕ್ಷಣ ಎಂದು ಈತ ಕರೆದಿದ್ದಾನೆ.

ನಿಜವಾದ ಶಿಕ್ಷಣವೆಂದರೆ ಮಕ್ಕಳ ದೈಹಿಕ ಶಕ್ತಿ ಸಾಮರ್ಥ್ಯ, ಜ್ಞಾನೇಂದ್ರಿಯ, ಮಾನಸಿಕಶಕ್ತಿ ಮತ್ತು ವ್ಯಕ್ತಿತ್ವಗಳೆಲ್ಲವನ್ನೂ ಬೆಳೆಸುವುದೇ ಆಗಿದೆ.
ಬಾಲ್ಯದಲ್ಲಿ ಮಕ್ಕಳ ಬೌದ್ಧಿಕ ಅಂಗಗಳ ಮೇಲೆ ಹೆಚ್ಚಿನ ಒತ್ತಡ ಹಾಕುವ ಶಿಕ್ಷಣಕ್ರಮ ವಿರಬಾರದು. ಆಟ, ಪಾಟ, ಮುಂತಾದ ಸಹ ಚಟುವಟಿಕೆಗಳ ಮೂಲಕಸಂತೋಷ ದಿಂದಕಾಲ ಕಳೆಯುವಂತೆ ಮಾಡಿ ಅವರ ಅನುಭವ ಪ್ರಪಂಚವನ್ನು ವಿಸ್ತರಿಸುವ ಶಿಕ್ಷಣ ನೀಡಬೇಕು. ಬಾಲ್ಯದಲ್ಲಿ ಮಕ್ಕಳು ಸಹಜವಾಗಿ ಸಂತೋಷದಿಂದ ಕಾಲ ಕಳೆಯುವಂತೆ ಮಾಡಬೇಕೇ ಹೊರತು ಕಾಲ ಉಳಿಸುವ, ಭೌದ್ಧಿಕ ಅಂಗಗಳ ಮೇಲೆ ವಿಪರೀತ ಒತ್ತಡ ಹಾಕುವ ಕೆಲಸವನ್ನು ಶಿಕ್ಷಣ ಮಾಡಬಾರದು.

ಪುಸ್ತಕಗಳಲ್ಲಿನ ವಿಷಯಗಳಿಂದ ಮಕ್ಕಳನ್ನು ಕಲಿಯುವಂತೆ ಮಾಡಬಾರದು. ಇದು ಅವನ ಪ್ರಕೃತಿಗೆ ವಿರೋಧ. ಬದಲು ತಮ್ಮ ಸ್ವಂತ ಚಟುವಟಿಕೆಗಳಿಂದ ವಿಭಿನ್ನರೀತಿಯ ಅನುಭವಗಳನ್ನು ಪಡೆಯುವುದರ, ಮೂಲಕ, ಸ್ವಪ್ರಯತ್ನದಿಂದ ಕಲಿಯುವಂತೆ ಮಾಡುವುದೇ ಸಹಜ ಮತ್ತು ಪರಿಣಾಮಕಾರಿ. ಪುಸ್ತಕದಿಂದ ಕಲಿತ ಗಿಳಿಪಾಠ ಅರ್ಥ ಪೂರ್ಣವೂ ಅಲ್ಲ ಶಾಶ್ವತವೂ ಅಲ್ಲ, ಆದ್ದರಿಂದ ಪುಸ್ತಕಗಳಿಂದ ಮಕ್ಕಳಿಗೆ ಕಲಿಸುವುದನ್ನು ರೂಸೋ ವಿರೋಧಿಸುತ್ತಿದ್ದ.

ಮಕ್ಕಳಿಗೆ ಸಾಂಪ್ರದಾಯಕ ಶಿಕ್ಷಣಕ್ಕಿಂತ ಅಸಂಪ್ರದಾಯಕ ಶಿಕ್ಷಣವೇ ಹೆಚ್ಚು ಸಹಜ ಮತ್ತು ಅರ್ಥಪೂರ್ಣವಾದ್ದರಿಂದ ರೂಢಿಬದ್ಧವಾದ ಸಾಂಪ್ರದಾಯಕ ಶಿಕ್ಷಣ ನೀಡಬಾರದು ಎನ್ನುತ್ತಾನೆ ರೂಸೋ. ಮಕ್ಕಳು ಪ್ರಬುದ್ಧರಾಗುವವರೆಗೆ ನೈಸರ್ಗಿಕ ಸಹಯೋಗದಿಂದ ಮಾತ್ರ ಕಲಿಸಬೇಕು. ಸಾಮಾಜಿಕ ಕಟ್ಟುಪಾಡು, ಬಂಧನ. ಕೃತಕತೆಗಳ ಪ್ರಭಾವದಿಂದ ಅಲ್ಲ.

ಕಟ್ಟುನಿಟಾದ ಶಿಸ್ತನ್ನು ಮಕ್ಕಳ ಮೇಲೆ ಹೇರದೆ ತಾವು ಮಾಡಿದ ತಪ್ಪು ತಮಗೇ ಅರಿವಾಗುವಂತಹ ಸ್ವತಂತ್ರವಾತಾವರಣವನ್ನು ಶಿಕ್ಷಣ ನಿರ್ಮಿಸಬೇಕು.

ಯಾವುದೇ ಅಭ್ಯಾಸಗಳನ್ನು ಮಕ್ಕಳಲ್ಲಿ ಬೆಳೆಸಿ ಅವುಗಳಿಗೆ ಗುಲಾನ ರಾಗಿ ಅಂಟಿಕೊಳ್ಳುವಂತೆ ಮಾಡಬಾರದು. ಅಭ್ಯಾಗಳನ್ನು ಬಿಡುವುದೂಕಷ್ಟ. ಆದ್ದರಿಂದ ಯಾವುದೇರೀತಿಯ ಸಾಮಾಜಿಕ ಅಭ್ಯಾಸಗಳನ್ನು ಶಿಕ್ಷಣವು ಬೆಳೆಸಬಾರದು. ಆದರೆ ಪ್ರಕೃತಿಧರ್ಮಕ್ಕೆ ಅನುಗಣವಾದ ಅಭ್ಯಾಸಗಳನ್ನು ಶಿಕ್ಷಣವು ಬೆಳೆಸಬಹುದು ಎಂದು ಹೇಳಿದ್ದಾನೆ.

ಸಮಾಜದ ಆಧುನಿಕತೆಯೇ ಇಂದಿನ ಮಾನವನ ಅನೇಕ ಸಂಕಷ್ಟಗಳಿಗೆ ಕಾರಣ. ಆದ್ದರಿಂದ ನಾವು ಮಾನವನ ಸಹಜಧರ್ಮವಾದ ಪ್ರಕೃತಿಧರ್ಮವನ್ನು ಶಿಕ್ಷಣದಲ್ಲಿ ಅಳವಡಿಸಿಕೊಳ್ಳುವುದೇ ಉತ್ತಮ ಎಂದಿದ್ದಾನೆ ರೂಸೋ.

**ಶೈಕ್ಷಣಿಕ ಗುರಿಗಳು**

ಮಗುವು ಈ ವಿಶ್ವದಲ್ಲಿ ಹುಟ್ಟುವಾಗ ತನ್ನ ಜೊತೆಯಲ್ಲಿ ಹೊತ್ತು ತಂದಂತಹ ಶಕ್ತಿ ಸಾಮರ್ಥ್ಯ ಗಳನ್ನು ಅಭಿವೃದಿಗೊಳಿಸುವುದೇ ಶಿಕ್ಷಣದ ಪ್ರಥಮ ಗುರಿಯಾಗಬೇಕು. ಆದರೆ ಈ ಬೆಳವಣಿಗೆಯು ಪ್ರಸ್ತುತ ಸಮಾಜದ ಆಧುನಿಕ ನಾಗರೀಕತೆಯ ಕೆಟ್ಟ ಪ್ರಭಾವಕ್ಕೆ ಮಗುವು ಒಳಗಾಗುವ ಮೊದಲೇ ಈ ಶಕ್ತಿ ಸಾಮರ್ಥ್ಯಗಳ ಬೆಳವಣಿಗೆ ಯಾಗ ಬೇಕುಎಂದು ಸಾರಿದನು.

ನೈತಿಕ ಶಿಕ್ಷಣವನ್ನು ನೇರವಾಗಿ ನಾವೇ ಕೊಡಬಾರದು. ಒಳ್ಳೆಯದು ಮತ್ತು ಕೆಟ್ಟದ್ದು, ಇವುಗಳ ಅಂತರ ಹಾಗೂ ಭಿನ್ನತೆಗಳನ್ನು ಸ್ವಾನುಭವದಿಂದಲೇ ಕಂಡು ಕೊಳ್ಳುವಂತಹ ನೈತಿಕ ಶಿಕ್ಷಣ ನೀಡಬೇಕು.

**ಮೊದಲು ನೈಜ ಮಾನವನಾಗುವಗುರಿ:—**ಭವಿಷ್ಯದಲ್ಲಿ ಮಗುವು ಏನಾಗುತ್ತದೆ? ಯಾವಕಸುಬು ಮಾಡಿ ಜೀವಿಸುತ್ತದೆ ಎಂದು ಹೇಳುವುದು ಕಷ್ಟ. ಆದ್ದರಿಂದ ಯಾವುದೆ ರೀತಿಯವೃತ್ತಿಶಿಕ್ಷಣದ ತರಬೇತಿಗೆ ಮೊದಲಪ್ರಾಶಸ್ತ್ಯ ನೀಡುವುದು ಸಾಧುವಲ್ಲ. ಆದ್ದರಿಂದ ಅವನನ್ನು ಮೊದಲು ಉತ್ತಮ ಮಾನವಂತ ಗುಣಗಳಲ್ಲಿ ಮತ್ತು ಸಾಮರ್ಥ್ಯಗಳುಳ್ಳ ನೈಜಮಾನವನ್ನಾಗಿ ಬೆಳೆಸುವುದೆ ಶಿಕ್ಷಣದ ಗುರಿಯಾಗಬೇಕು.

**ಮಕ್ಕಳ ವಿವಿಧ ಬೆಳವಣಿಗೆಯ ಹಂತಗಳಿಗನು ಸಾರವಾದ ಶಿಕ್ಷಣದ ಗುರಿಗಳು:**

**ಶೈಶವಾಸ್ಥೆಯ ಮಕ್ಕಳಿಗೆ:—**(ಅಂದರೆ ಹುಟ್ಟನಿಂದ ಐದುವರ್ಷಗಳವರೆಗೆ) ತನ್ನ ಶಕ್ತಿ ಸಾಮರ್ಥ್ಯಕ್ಕನುಗುಣವಾಗಿ ಸಲುಗೆಯಿಂದ, ಸಂತೋಷದಿಂದ ಕಾಲಕಳೆಯುವ ಚಟುವಟಿಕೆಗಳಲ್ಲಿ ಸ್ವತಂತ್ರವಾಗಿ ನಿರತವಾಗುವಂತೆ ಮಾಡಿ ದೈಹಿಕಚಟುವಟಿಕೆಗೆಯ ಶಿಕ್ಷಣ ನೀಡಬೇಕು ಮತ್ತು ದುಶ್ಚಟಗಳಿಂದ ದೂರವಿಡುವಂತೆ ನೋಡಿಕೊಳ್ಳಬೇಕು. ದೈಹಿಕ ಬೆಳವಣಿಗೆ, ಉತ್ತಮ ಆರೋಗ್ಯ, ಸರಿಯಾದ ಇಂದ್ರಿಯಗಳ ಬೆಳವಣಿಗೆಯ ಕಡೆಗೆ ಗಮನ ನೀಡಬೇಕು.

**ಬಾಲ್ಯವಸ್ಥೆಯ ಮಕ್ಕಳಿಗೆ:—**(ಅಂದರೆ 5-12 ವರ್ಷಗಳವರೆಗೆ) ಕ್ರಮಬದ್ಧವಾದ ಸ್ವತಂತ್ರ ಚಟುವಟಿಕೆಗಳಲ್ಲಿ ನಿರತರಾಗಲು ಬೇಕಾದದೇಹ ಶಕ್ತಿ ಇಂದ್ರಿಯಗಳ ಬೆಳವಣಿಗೆ ಸಾಧಿಸಿ, ತನ್ಮೂಲಕ ಜ್ಞಾನವನ್ನು ಪಡೆದು ಕೊಳ್ಳುವ ಶಕ್ತಿಯನ್ನು ಬೆಳೆಸುವಗುರಿಯುಳ್ಳ ಶಿಕ್ಷಣ ನೀಡಬೇಕು. ಚಟುವಟಿಕೆಗಳ ಮೂಲಕ ನೇರಜ್ಞಾನ ಪಡೆಯುವ ಅವಕಾಶವಿರಬೇಕು. ವಿವರಣಾತ್ಮಕ ಬೋಧನೆ, ಪುಸ್ತಕಗಳಿಂದ ಕಲಿಕೆ, ಭಾಷೆ, ಸಮಾಜಶಾಸ್ತ್ರ ಮತ್ತು ನೈತಿಕ ಬೋಧನೆ ಈ ಹಂತದ ಮಕ್ಕಳಿಗೆ ಅರ್ಥಪೂರ್ಣ ವಲ್ಲ. ಅದ್ದರಿಂದ ಇಂತಹ ಕಲಿಕೆಗೆ ಇಲ್ಲಿ ಅವಕಾಶವು ಇರಬಾರದು ಎನ್ನುತ್ತಾರೆ.

**ಕೌಮಾರ್ಯಾವಸ್ಥೆಯ ಮಕ್ಕಳ: —** (ಅಂದರೆ 12-15 ವರ್ಷಗಳವರಗೆ) ಹೆಚ್ಚಿನ ಶಕ್ತಿ ಉತ್ಪಾದನೆ ಇರುವದರಿಂದ, ಜೀವನದ ಅವಶ್ಯಕತೆಗಳನ್ನು ಪೂರೈಸಿಕೊಳ್ಳ ಬಲ್ಲಂತಹ ಉಪಯುಕ್ತ ಜ್ಞಾನಸಂಪಾದನೆಗೆ ಈ ಶಕ್ತಿಯನ್ನು ಬೆಳಸಿಕೊಳ್ಳುವ ಗುರಿಯಿ-ರುವ ಶಿಕ್ಷಣ ನೀಡಬೇಕು. ಈ ಹಂತದಲ್ಲಿ ಭೌತ ವಿಜ್ಞಾನ, ಭಾಷೆ, ಗಣಿತ. ಶಾರೀರಿಕ ಶಿಕ್ಷಣ ವಾಣಿಜ್ಯ, ಸಮಾಜ ಶಾಸ್ತ್ರ, ಸಂಗೀತ ಚಿತ್ರ ಕಲೆಗಳು ಕಲಿಕೆ ಇರಬಹುದು. ಒಂದೊಂದು ವಿಷಯ ಬೋಧನೆಯೂ ತನ್ನದೇ ವೈಶಿಷ್ಟ ಮೌಲ್ಯ ಬೆಳವಣಿಗೆಗೆ ಸಹಾಯವಾಗುವಂತಿರಬೇಕು. ಉದಾಹರಣೆಗೆ ಗಣಿತಶಾಸ್ತ್ರ ನಿಖರವಾದ ಚಿಂತನೆಯ ಬೆಳವಣಿಗೆಗೆ ಸಹಕಾರಿ ಆದರೆ ಸಮಾಜಶಾಸ್ತ್ರ ಮಾನವೀಯ ಸಂಬಂಧಗಳನ್ನು ತಿಳಿಯುವ ಬೆಳೆಸಿಕೊಳ್ಳುವ ಅವಕಾಶ ನೀಡಬೇಕು.

**ಯೌವನಾವಸ್ಥೆಯ ಮಕ್ಕಳಿಗೆ: —**(ಅಂದರೆ 15ರಿಂದ20ವರ್ಷಗಳ ವರೆಗೆ) ಹೃದಯ ಶ್ರೀಮಂತಿಕೆಯನ್ನು ರೂಪಿಸುವಂತಹ ಶಿಕ್ಷಣ ನೀಡಬೇಕು. ಮೃದು ಸ್ವಭಾವದ ಬೆಳವಣಿಗೆ ಇತರರೊಂದಿಗೆ ಪ್ರೀತಿ ವಿಶ್ವಾಸದೊಡನೆ ಬೆರೆಯುವ ಮತ್ತು ಬಾಳುವ ಕಲೆಯನ್ನು ಕಲಿಸ ಬೇಕು. ನೈತಿಕ ಶಿಕ್ಷಣವನ್ನು ಈ ಹಂತದಲ್ಲಿ ಚಟುವಟಿಕೆ ಮತ್ತು ವೃತ್ತಿ ಬೆಳವಣಿಗೆಯ ಮೂಲಕ ನೀಡಬಹುದು. ಚರಿತ್ರೆ, ಧಮ, ಸಂಸ್ಕೃತಿ ಮತ್ತು ಲೈಂಗಿಕ ಶಿಕ್ಷಣವನ್ನು ಈ ಹಂತದಲ್ಲಿ ನೀಡ ಬಹುದು. ಧಾರ್ಮಿಕ ಶಿಕ್ಷಣ ದೈವತ್ವದ ಅರಿವನ್ನು ಮೂಡಿಸಲು ದೈಹಿಕ ಶಿಕ್ಷಣವು ಕಷ್ಟಪಟ್ಟು ದುಡಿಯುವ ಶಕ್ತಿಯನ್ನು ಬೆಳೆಸಲು, ಲೈಂಗಿಕ ಚಟುವಟಿಕೆಗಳ ಬಗ್ಗೆ ಸರಿಯಾದ ದೃಷ್ಟಿಕೋನ ಬೆಳೆಸಲು ಸಹಾಯ ಮಾಡ ಬೇಕು. ಮಾನವನ ಇತಿಹಾಸ ಮತ್ತು ಸಾಮಾಜಿಕ ಬಾಂಧವ್ಯಗಳ ಅರಿವಿಗೆ ಗಣ್ಯವ್ಯಕ್ತಿಗಳ ಆತ್ಮ ಚರಿತ್ರೆಯ ಅಭ್ಯಾಸ ಸಹಾಯವಾಗುವಂತಿರಬೇಕು.

**ಬೋಧನೆಗೆ ಸಲಹೆಗಳು:-** ಇಡೀ ತರಗತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮಕ್ಕಳಿಗೆ ಬೋಧಿಸುತ್ತಿರುವ ಪದ್ಧತಿ ಪರಿಣಾಮಕಾರಿಯಲ್ಲ -ವೈಯಕ್ತಿಕ ಗಮನ ನೀಡಿ ಬೋಧಿಸುವುದೇ ಪರಿಣಾಮಕಾರಿ. ಮಗುವಿನ ವ್ಯಕ್ತಿತ್ವವನ್ನು ಗುರುತಿಸಿ ಅದಕ್ಕನುಗುಣ ವಾಗಿ ಬೋಧಿಸುವುದೇ ಉತ್ತಮ. ಬೋಧನೆಯಲ್ಲಿ ಮಕ್ಕಳನ್ನು ಮಕ್ಕಳಾಗಿಯೇ

ಗಣನೆಗೆ ತೆಗೆದುಕೊಳ್ಳಬೇಕೇ ಹೊರತು ಚಿಕ್ಕ ಪ್ರಮಾಣದ ವಯಸ್ಕ ವ್ಯಕ್ತಿಯಂತೆ ಪರಿಗಣಿಸ ಬಾರದು. ಮಾಡಿಕಲಿ ಎಂಬ ತತ್ವವನ್ನು ಅಳವಡಿಸಿದಾಗ ಮಾತ್ರ ಭೋದನೆ ಪರಿಣಾಮಕಾರಿ. ಮಾಡಲು ಸಾಧ್ಯವಿಲ್ಲ ಎಂಬ ಸನ್ನಿವೇಶಗಳಲ್ಲಿ ಮಾತ್ರ ಸಾಂಪ್ರದಾಯಿಕ ಭೋದನೆ ಮಾಡಬಹುದು.

ಸ್ವಯಂ ಚಟುವಟಿಕೆ ಮತ್ತು ಅನೇಕ ಅನುಭವಗಳಿಂದ ಕಲಿ ಎಂಬ ತತ್ವವನ್ನು ಭೋದನೆಯಲ್ಲಿ ಅಳವಡಿಸಿ ಕೊಳ್ಳಬೇಕು. ಪುಸ್ತಕಗಳಿಂದ ಕಲಿತದ್ದು ಅರ್ಥಪೂರ್ಣವೂ ಅಲ್ಲ ಶಾಶ್ವತವೂ.ಅಲ್ಲ

ಮೂಲ ಅನ್ವೇಷಕನ ಸ್ಥಾನದಲ್ಲಿ ಮಕ್ಕಳನ್ನು ಬಿಟ್ಟು, ಕಲಿಯುವಂತೆ ಮಾಡುವ ಅನ್ವೇಷಣಾ ಪದ್ದತಿಯನ್ನು ಬಳಸುವುದು ಉತ್ತಮ.

ಉದಾಹರಣೆಗಳು, ದೃಷ್ಟಾಂತಗಳು, ನೈಸರ್ಗಿಕ ಸನ್ನಿವೇಶಗಳ ಮೂಲಕವೇ ತಾತ್ವಿಕ ಚಿಂತನೆಗಳನ್ನು ನೈತಿಕ ವಿಚಾರಗಳನ್ನು ಕಲಿಸಬೇಕು ನೇರವಾದ ಚಿಂತನೆಗಳು ಮತ್ತು ವಿಚಾರಗಳ ನಿವೇದನೆ ಅರ್ಥಹೀನ ಹಾಗೆಯೇ ನಿಜವಾದ ಸಾಮಾಜಿಕ ಜ್ಞಾನ ಪಡೆಯಲು ಸಾಮಾಜಿಕ ಭಾಗವಹಿಸುವಿಕೆಯಿಂದ ಮಾತ್ರ ಸಾಧ್ಯ. ಮಕ್ಕಳ ಆಂತರಿಕ ಸಂವೇದನಗಳನ್ನು ಪ್ರವೃತ್ತಿಗಳನ್ನು ತರಬೇತಿಗೆ ಒಳಪಡಿಸಿ ಸ್ವತಂತ್ರ ಸನ್ನಿವೇಶಗಳಲ್ಲಿ, ತನಗೆ ತಾನೆ, ಒಳ್ಳೆಯದಾವುದು ? ಕೆಟ್ಟದ್ದಾವುದು ಎಂದು ಮನವರಿಕೆ ಮಾಡಿಕೊಳ್ಳುವಂತೆ ಮಾಡುವುದೇ ನಿಜವಾದ ಶಿಸ್ತಿನ ಬೆಳವಣಿಗೆ. ಶಿಸ್ತನ್ನು ಕಾಪಾಡುವುದು ಎಂದರೆ ಮಕ್ಕಳನ್ನು ಬಾಹ್ಯ ಶಿಕ್ಷೆಗೆ ಒಳಪಡಿಸುವುದು ಎಂದಲ್ಲ. ಅನೇಕ ಸಂದರ್ಭಗಳಲ್ಲಿ ಮಕ್ಕಳು ತಾವು ಮಾಡಿದ ತಪ್ಪಿಗೂ ಮತ್ತು ಶಿಕ್ಷಕರು ನೀಡಿದ ಶಿಕ್ಷೆಗೂ ಸಂಭಂದವನ್ನೇ ಕಲ್ಪಿಸಿಕೊಳ್ಳುವುದಿಲ್ಲ. ಇದರಿಂದ ಅನಾಹುತವೇ ಹೆಚ್ಚು, ಆದ್ದರಿಂದ ತಮ್ಮ ತಪ್ಪನ್ನು ತಾವೇ ಅರಿಯುವಂತೆ ಮಾಡುವ ನಿಸರ್ಗ-ನಿಯಮವನ್ನು ಪಾಲಿಸುವುದೇ ಶಿಸ್ತಿನ, ಬೆಳವಣಿಗೆಗೆ ಉತ್ತಮ. ಈ ದೃಷ್ಟಿಯಲ್ಲಿ ನಿಸರ್ಗವೇ ಮಕ್ಕಳಿಗೆ ಉತ್ತಮ ಶಿಕ್ಷಕ. ನೈತಿಕ ಬೆಳವಣಿಗೆಗೂ ಇದೇ ತತ್ವ ಉತ್ತಮ ಎಂದು ರೂಸೋ ಪ್ರತಿಪಾದಿಸಿದ್ದಾನೆ.

ಹೀಗೆ ರೂಸೋ ಶಿಕ್ಷಣ ರಂಗಕ್ಕೆ ಹೊಸ ಆಯಾಮವನ್ನು ನೀಡಿದ ಮಹಾ-ಪುರುಷ, ಮನಶ್ಶಾಸ್ತ್ರೀಯ ದೃಷ್ಟಿ ಕೋನ, ವೈಜ್ಞಾನಿಕ ದೃಷ್ಟಿಕೋನ ಮತ್ತು ಸಾಮಾಜಿಕ ದೃಷ್ಟಿಕೋನವನ್ನು ಶಿಕ್ಷಣ ರಂಗಕ್ಕೆ ಮೊದಲಬಾರಿ ನೀಡಿದ ಕೀರ್ತಿ ಈತನದು. ಈತನ್ನು ಪ್ರತಿಪಾದಿಸಿದ ಕೆಲವು ವಿಚಾರಗಳು ಗೊಂದಲಕ್ಕೆಡೆ ಮಾಡಿವೆ. ಉದಾಹರಣೆಗೆ. ಶಿಕ್ಷಣವು ಮಕ್ಕಳಲ್ಲಿ ಯಾವುದೇ ಅಭ್ಯಾಸಗಳನ್ನು ಬೆಳೆಸಬಾರದು. ಪುಸ್ತಕಗಳು ಬಳಕೆಯ

ನಿಷೇಧ ನೇರ ಭೋಧನೆಯ ನಿಷೇಧ, ಪರಿಪೂರ್ಣ ಸ್ವತಂತ್ರ ನೀಡಿಕೆಯ ಕಲ್ಪನೆ. ಭವಿಷ್ಯ ರೂಪಿಸುವ ವೃತ್ತಿ ಶಿಕ್ಷಣವನ್ನು ಅಲ್ಲಗಳಿಯುವಿಕೆ ಇವು ಸಾಕಷ್ಟು ಚರ್ಚಾ-ಸ್ಪದ ವಿಷಯಗಳಾಗಿವೆ,

ಇಷ್ಟಾದರೂ ಈತನು ಶಿಕ್ಷಣಕ್ಷೇತ್ರಕ್ಕೆ ನೀಡಿದ ಕೊಡುಗೆ ಅದ್ಭುತ. ಮತ್ತು ಮಹತ್ತರ. ಮಕ್ಕಳನ್ನು ಮಕ್ಕಳಂತೆಯೇ ಕಂಡು ಅವರ ವ್ಯಕ್ತಿತ್ವ ಗುರುತಿಸಿ ಗೌರವಿಸಿ, ವೈಯಕ್ತಿಕ ಗಮನ ನೀಡಿ, ತನ್ನಲ್ಲಿನ ಶಕ್ತಿ ಸಾಮರ್ಥ್ಯಗಳಿಗೆ ಅನುಗುಣವಾಗಿ ಸ್ವತಂತ್ರ ಚಟುವಟಿಕೆಗಳ ಮತ್ತು ನೇರ ಅನುಭವಗಳ ಮೂಲಕ ಶಿಕ್ಷಣ ನೀಡುವ ಕಲ್ಪನೆ ವಿಚಾರ ಬಹಳ ಮಹತ್ವದ್ದು. ಈತನ ವಿರೂಧಿಸಿದ ಅನೇಕ ಅಶೈಕ್ಷಣಿಕ ವಿಚಾರಗಳನ್ನು ತಂತ್ರಗಳನ್ನು ಇಂದೂ ಸಹ ನಮ್ಮ ಶಿಕ್ಷಣವ್ಯವಸ್ಥೆಯು ಮೈಗೂಡಿಸಿಕೊಂಡಿದೆ. ಇದನ್ನು ಸ್ವಲ್ಪ ಎಚ್ಚರಿಕೆಯಿಂದ ಗಮನಿಸಿದಾಗ ನಿಜವಾದ ಶಿಕ್ಷಣ ರೂಪಿಸುವ ಜವಾಬ್ದಾರಿ ಹೊತ್ತ ನಾವು ಯಾವ ದಾರಿಯಲ್ಲಿ ಮುಂದೆ ಸಾಗಬೇಕೆಂಬುದು ಈ ಹಿನ್ನೆಲೆಯಲ್ಲಿ ಸ್ಪಷ್ಟವಾಗಿ ಕಂಡು ಬರುತ್ತದೆ ಎಂದೇ ನನ್ನ ಭಾವನೆ.

(ಮುಂದುವರೆದಿದೆ)

# ಕೃಷಿಯಲ್ಲಿ ಮಹಿಳೆ

ಡಿ: ವೆಂಕಟರಾವ್ ಎಂ.ಎ, ಪ್ರಾಚಾರ್ಯರು, ಚಂದನ, ಹಾಸನ.

**ಕೆಲಸದ ಸ್ವರೂಪ– ೨**

ಗ್ರಾಮೀಣ ಸಮಾಜದಲ್ಲಿ ಮಹಿಳೆಯರ ಕೃಷಿ ಕಾರ್ಯಗಳನ್ನು ಸ್ಥೂಲವಾಗಿ ಎರಡು ವಿಭಾಗಗಳಾಗಿ ವಿಂಗಡಿಸಬಹುದು. **ಮೊದಲನೆಯದು** ರೈತ ಕುಟುಂಬಕ್ಕೆ ಸೇರಿದ ಹೆಣ್ಣು ಮಕ್ಕಳು ತಮ್ಮ ಕುಟುಂಬದ ಕೃಷಿ ಕೆಲಸವನ್ನು ಮನೆಗೆಲಸದ ಒಂದು ಭಾಗವಾಗಿ ಮಾಡಿಕೊಂಡಿರುವುದು. **ಎರಡನೆಯದು** ಬಡ ಹಾಗೂ ಭೂಹೀನ ಕುಟುಂಬಗಳ ಹೆಣ್ಣು ಮಕ್ಕಳು ಜೀವನ ನಿರ್ವಹಣೆಗಾಗಿ ಬೇರೊಬ್ಬರ ಹೊಲದಲ್ಲಿ ಕೂಲಿಗಾಗಿ ದುಡಿಯುವುದು. ಬಡ ಮತ್ತು ಮಧ್ಯಮವರ್ಗಕ್ಕೆ ಸೇರಿದ ರೈತ ಕುಟುಂಬಗಳ ಹೆಣ್ಣು ಮಕ್ಕಳು ತಮಗೆ ಸೇರಿದ ಹೊಲದಲ್ಲಿ ದುಡಿಯುವುದರ ಜೊತೆಗೆ ಮತ್ತೊಬ್ಬರ ಹೊಲದಲ್ಲೂ ದುಡಿಯುವುದುಂಟು. ನಮ್ಮ ದೇಶದಲ್ಲಿ ವರ್ಷಗಳ ಕರಾರಿನಲ್ಲಿ ಅಥವಾ ಜೀವನ ಪೂರ್ತಿಯಾಗಿ ಹೆಣ್ಣುಮಕ್ಕಳನ್ನು ಜೀತದಾಳುಗಳಾಗಿ ಮಾಡಿಕೊಂಡಿರುವ ಪ್ರಸಂಗಗಳು ಕಂಡುಬಂದಿಲ್ಲ. ಆದರೂ ಜೀತದಾಳುಗಳಾದ ತಮ್ಮ ಗಂಡಂದಿರ ಅಥವಾ ತಂದೆ ಜೊತೆ ದುಡಿಯುವ ಹೆಣ್ಣುಮಕ್ಕಳನ್ನು ನಾವು ಕಾಣಬಹುದು.

ಗ್ರಾಮೀಣ ಸಮಾಜದಲ್ಲಿ ಕಂಡುಬರುವ ಒಂದು ಮುಖ್ಯ ಅಂಶವೆಂದರೆ ಪುರುಷರ ಕೆಲಸ ಕಾರ್ಯಗಳು ಕೇವಲ ಹೊಲಗದ್ದೆ ತೋಟಗಳಿಗೆ ಮಾತ್ರ ಸೀಮಿತವಾಗಿರುತ್ತವೆ. ಆದರೆ ಮಹಿಳೆಯರ ಕೆಲಸ ಕಾರ್ಯಗಳಿಗೆ ಎಲ್ಲೆಯೇ ಇಲ್ಲ. ಜಾನಪದ ಹೇಳುವಂತೆ ಅವರದು ಎಂದೆಂದಿಗೂ ಮುಗಿಯದ ಕೆಲಸ. ಕುಟುಂಬವನ್ನು ಪೋಷಿಸುವ ಕೃಷಿ ಕಾರ್ಯಗಳನ್ನು ಕೈಗೊಳ್ಳುವುದರ ಜೊತೆಗೆ ಕುಟುಂಬದ ಹೊರೆಯನ್ನು ಮಹಿಳೆಯರೇ ಹೊರಬೇಕು. ಇವರಿಗೆ ಜವಾಬ್ದಾರಿಗಳು ಅಪರಿಮಿತ, ಸೂರ್ಯ ಹುಟ್ಟುವುದಕ್ಕೆ ಮೊದಲಿನಿಂದಲೇ ಇವರ ಕೆಲಸ ಆರಂಭ. ಬಾಗಿಲು ಶುಚಿ ಮಾಡುವುದು, ಮನೆ ಸ್ವಚ್ಛ ಮಾಡುವುದು, ನೀರು ತರುವುದು, ಪಾತ್ರೆ ಬೆಳಗುವುದು, ಹಿಂಡಿ ತಯಾರಿಸಿ ಅದನ್ನು ನೀರನ್ನು ದನಕ್ಕಿಡುವುದು, ಹಾಲು ಕರೆಯುವುದು, ಕೊಟ್ಟಿಗೆಯನ್ನೂ, ದನದ ಮೈಯನ್ನೂ ತೊಳೆಯುವುದು, ಅಡಿಗೆ ಮಾಡುವುದು, ಮಕ್ಕಳನ್ನು ಸಂತೈಸುವುದು, ಶಾಲೆಗೆ ಕಳುಹಿಸುವುದು ಮುಂತಾದ ಕೆಲಸಗಳನ್ನು ಕೃಷಿ ಕಾರ್ಮಿಕ ಮಹಿಳೆ ಕೃಷಿ ಕೆಲಸಕ್ಕೆ ಹೋಗುವುದಕ್ಕೆ ಮೊದಲು ನಿರ್ವಹಿಸ ಬೇಕಾಗುತ್ತದೆ. ಉರಿ ಬಿಸಿಲಿನಲ್ಲಿ, ಚಳಿ ಎನ್ನದೆ, ಮಳೆ ಎನ್ನದೆ ಆಕೆ ಹೊಲ ಗದ್ದೆಗಳಲ್ಲಿ ಏಳೆಂಟು ಗಂಟೆಗಳು

ದುಡಿಯುತ್ತಾಳೆ, ಆ ನಂತರವಾದರೂ ಆಕೆ ಸುಧಾರಿಸಿಕೊಳ್ಳುವ ಹಾಗಿಲ್ಲ. ಧಾವಂತ ದಿಂದ ಮನೆಗೆ ಬಂದವಳೇ ತನಗಾಗಿ ಕಾಯುತ್ತಿರುವ ಕೆಲಸಗಳಿಗೆ ಆಕೆ ಹೆಗೊಡ ಬೇಕಾಗುತ್ತದೆ. ಇಷ್ಟೆಲ್ಲಾ ಕೆಲಸ ಕಾರ್ಯಗಳ ಜೊತೆಗೇ ಹೊಲಗದ್ದೆಗೆ ಬುತ್ತಿ ಒಯ್ಯುವುದು, ಬಟ್ಟೆ ಒಗೆಯುವುದು, ದನಕರುಗಳಿಗೆ ಹುಲ್ಲು ತರುವುದು, ಸೌದೆ ಆರಿಸುವುದು, ದನ-ಎಮ್ಮೆ, ಮೇಕೆಗಳನ್ನು ಬಯಲಿನಲ್ಲಿ ಮೇಯಿಸುವುದು, ಬೆರಣಿ ಮಾಡುವುದು, ತಿಪ್ಪೆ ಗೊಬ್ಬರ ಮಾಡುವುದು, ಮೊಸರು-ತುಪ್ಪ ಮಾಡುವುದು, ಮೊದಲಾದ ಕೆಲಸಗಳೂ ಮಹಿಳೆಯ ಪಾಲಿಗೇ ಬರುತ್ತವೆ. ಬಸುರಿ ಇರಲಿ, ಬಾಣಂತಿ ಇರಲಿ ಈ ಹೊರೆ ಕೆಲಸಗಳಿಂದ ಆಕೆ ತಪ್ಪಿಸಿ ಕೊಳ್ಳುವಂತಿಲ್ಲ. ಅಂಜದೆ, ಅಳುಕದೆ ಎಂತಹ ಕಷ್ಟ ಕಾರ್ಪಣ್ಯಗಳನ್ನೂ ಆಕೆ ನಿಭಾಯಿಸಿ ಕೊಂಡು ಹೋಗಬೇಕು. ಕೆಲವು ಪುರುಷರು ದನಕರುಗಳ ಆರೈಕೆಯಲ್ಲಿ ಸಹಾಯ ಮಾಡಬಹುದು. ಆದರೆ ಆದರಿಂದೇನೂ ಮಹಿಳೆಯರ ಕೆಲಸದ ಹೊರೆ ಕಡಿಮೆಯಾಗದು.

ಕುಟುಂಬವನ್ನು ಒಪ್ಪವಮಾಡಿ, ಪತಿ ಮತ್ತು ಮಕ್ಕಳ ಯೋಗ ಕ್ಷೇಮವನ್ನು ನೋಡಿಕೊಂಡು ಹೊಲಗದ್ದೆಗಳಲ್ಲೂ ದುಡಿಯುವುದೆಂದರೆ ಸಾಮಾನ್ಯ ಸಂಗತಿಯಲ್ಲ. ಈ ಮಧ್ಯೆ ಅವರ ವೈಯಕ್ತಿಕ ಆರೋಗ್ಯ ಭಾಗ್ಯಗಳಿಗೆ ತಿಲಾಂಜಲಿ, ವಿನೋದ ವಿಹಾರ ಗಳೂ ಇವರ ಪಾಲಿಗೆ ಸೊನ್ನೆ. ಹೊಲ ಗದ್ದೆಗಳಿಂದ ಮರಳುವ ಪುರುಷರು ಬೀಡಿ ಸೇದುತ್ತಾ ಆರಾಮವಾಗಿ ಮನೆಯಂಗಳದಲ್ಲಿ ಕೂತು ಹರಟ ಬಲ್ಲರು. ಆದರೆ ಇವೆಲ್ಲ-ವುಗಳಿಂದ ಗ್ರಾಮೀಣ ಮಹಿಳೆಯರು ವಂಚಿತರು. "ಅಂಬಲಿ ಊಟ, ಕಂಬಳಿ ಹೊದಿಕೆ" ಇದೇ ಅವರ ಬಾಳು, ನಿಜವಾದ ಸ್ವಾತಂತ್ರ್ಯದ ಅರಿವಾಗಲಿ, ಮಾನಸಿಕ ನೆಮ್ಮದಿ ಯಾಗಲೀ ಇವರಿಗಿಲ್ಲ, ಜೀವಿಸಿರವಷ್ಟು ದಿನವೂ ದುಡಿತವೊಂದೇ ಇವರ ಪಾಲಿಗೆ.

ಸಾಮಾನ್ಯವಾಗಿ ಕೃಷಿ ಕಾರ್ಮಿಕ ಮಹಿಳೆಯರು ಹಗುರವಾದ ಕೆಲಸಗಳನ್ನು ಅಂದರೆ ಸಸಿ ಹಾಕುವುದು, ಹುಲ್ಲು ಆಯುವುದು, ಕಳೆ ತೆಗೆಯುವುದು, ಕಾಳು ಬಿಡಿ ಸುವುದು, ಗೊಬ್ಬರ ಹಾಕುವುದು, ಬೆಳೆಯನ್ನು ಕಾಯುವುದು, ಬೆಳೆ ಕಟಾವು ಮುಂತಾದ ಕೆಲಸಗಳನ್ನು ಮಾಡುತ್ತಾರೆ. ಆದರೂ, ಯಾವ ಹಂತದ ಕೃಷಿ ಕೆಲಸವಾದರೂ ಅವರು ಕೈ ಹಾಕದೆ ಮುಗಿಯುವುದಿಲ್ಲ. ಪುರುಷ ಭೂಮಿಯನ್ನು ಉತ್ತ ನಂತರ ಹೆಂಟೆ ಒಡೆದು ಮಣ್ಣು ಹಸನು ಮಾಡುವ ಕೆಲಸ ಮಹಿಳೆಯದು. ಕೂರಿಗೆಯಲ್ಲಿ ಬೀಜ ಬಿತ್ತುವುದರಲ್ಲಿ ಆಕೆಯ ಸಹಾಯಬೇಕು, ರಾಗಿ, ಜೋಳ, ಬತ್ತ ಹೀಗೆ ಯಾವುದೇ ಬೆಳೆಯಾದರೂ ಕಳೆ ಕೀಳಲು ಮಹಿಳೆಯರೇ ಆಗಬೇಕು. ಬತ್ತದ ಸಸಿಯನ್ನು ಒಟ್ಟು ಪಾತಿಯಿಂದ ತಂದು ಗದ್ದೆಗೆ ನಾಟಿ ಮಾಡುವ ಕೆಲಸವಂತೂ ಹೆಚ್ಚು ಕಡಿಮೆ ಪೂರ್ಣವಾಗಿ ಮಹಿಳೆಯರ ಪಾಲಿಗೇ ಬಂದಿದೆ. ಮೆಣಸಿನಕಾಯಿ ಟೊಮ್ಯಾಟೋ ಮೊದಲಾದ ಸಸಿಗಳನ್ನು ನೆಡಲಂತೂ ಮಹಿಳೆಯರೇ ಸರಿ. ಹೀಗೆ ಬಿತ್ತನೆಯಲ್ಲಿ ಮಹಿಳೆಯರು ನೆರವು ನೀಡದ ಬೆಳೆಯೇ ಇಲ್ಲ ಎನ್ನಬಹುದು.

ಬೆಳೆಯನ್ನು ಬೆಳೆಸುವ ಸಮಯದಲ್ಲಿ ಹಾಗೂ ಬೆಳೆದ ಫಸಲಿನ ಕುಯಲಿನ ಸಮಯದಲ್ಲಿ ಕೃಷಿ ಕಾರ್ಮಿಕ ಮಹಿಳೆಯರಿಗೆ ಬಿಡುವೇ ಇರುವುದಿಲ್ಲ. ಈ ದಿನ-ಗಳಲ್ಲಿ ಹಣ ಸಂಪಾದನೆಗೆ ಹೆಚ್ಚು ಅವಕಾಶ ಇರುವುದರಿಂದ ಕೃಷಿ ಕೂಲಿ ಮಾಡುವ ಮಹಿಳೆಯರು ಕುಯಲಿನ ಸಮಯ ಬಂದೀತೇ ಎಂದು ಕಾಯುತ್ತಿರುತ್ತಾರೆ. ತರಕಾರಿಗಳನ್ನು ಕೀಳುವುದು ಸಾಮಾನ್ಯವಾಗಿ ಮಹಿಳೆಯರೇ. ರಾಗಿ, ಜೋಳ ಬತ್ತಗಳನ್ನು ಹೊಲಗದ್ದೆಗಳಿಂದ ಕುಯ್ದು, ಹೊರೆಕಟ್ಟಿತರುವುದು, ಕಣದಲ್ಲಿ ಸೇರಿಸುವುದು ಮುಂತಾದ ಕೆಲಸಗಳೂ ಮಹಿಳೆಯರ ಪಾಲಿಗೆ ಉಂಟು. ಹತ್ತಿ ಬಿಡುಸುವುದು, ಕಬ್ಬು ಕಡಿಯುವುದು ಮೊದಲಾದ ಕೆಲಸಗಳಲ್ಲೂ ಮಹಿಳೆಯರು ಪಾಲ್ಗೊಳ್ಳುವುದುಂಟು. ಕಣಮಾಡುವಾಗಲೂ ಮಹಿಳೆಯರಿಗೆ ಕೆಲವೊಂದು ವಿಶಿಷ್ಟ ಕೆಲಸಗಳಿರುತ್ತವೆ. ನೆಲ್ಲು ಬಡಿಯುವುದು, ಜರಡಿ ಆಡುವುದು,ಕಾಳುತೂರುವುದು, ರಾಶಿ ಮಾಡುವುದು ಹೀಗೆ ಅವರಿಗೆ ಬೇಕಾದಷ್ಟು ಕೆಲಸವಿರುತ್ತದೆ. ಬತ್ತಕುಟ್ಟುವುದಕ್ಕೆ ರಾಗಿ ಜೋಳ ಬೀಸುವುದಕ್ಕೆ ಈಗ ಯಂತ್ರಗಳು ಬಂದಿರುವುದರಿಂದ ಮಹಿಳೆಯರಿಗೆ ಈ ಕೆಲಸ ಹಗುರವಾಗಿದೆ.

ತೆಂಗು, ಅಡಿಕೆ, ಕಾಫಿ, ಚಹಾ, ರಬ್ಬರ್, ಗೋಡಂಬಿ ಮುಂತಾದ ಪ್ಲಾಂಟೇಷನ್‌ಗಳಲ್ಲಿನ ಹಣದ ಬೆಳೆಗಳಿಗಂತೂ ಕೃಷಿ ಕಾರ್ಮಿಕ ಮಹಿಳೆಯರು ಇಲ್ಲದಿದ್ದರೆ ಆವುದೇ ಇಲ್ಲ. ಜೀವನದ ಎಲ್ಲಾ ಕ್ಷೇತ್ರಗಳಲ್ಲೂ ದರ್ಪಮನೋಭಾವದಿಂದ ಅಧಿಕಾರವನ್ನು ಸ್ಥಾಪಿಸಿಕೊಂಡಿರುವ ಪುರುಷ, ಈ ಕ್ಷೇತ್ರದಲ್ಲಿ ಮಾತ್ರ ಮಹಿಳೆಯರಿಗೆ ಮುಂದುವರಿಯಲು ಬಿಟ್ಟಿದೆ. ಇದಕ್ಕೆ ಕಾರಣ ಪ್ಲಾಂಟೇಷನ್‌ಗಳಲ್ಲಿನ ವಾತಾವರಣ ಎಡೆಬಿಡದೆ ಸುರಿಯುತ್ತಿರುವ ಮಳೆ, ಮೈಕೊರೆಯುವ ಚಳಿ, ಕೊಳೆತ ಸೊಪ್ಪಿನ ನಡುವೆ ರಕ್ತ ಹಿರುವ ಜಿಗಣಿ, ಸೊಳ್ಳೆಗಳು, ಇವುಗಳ ನಡುವೆ ಮಹಿಳೆಯರು ಬೆಳಗಿನಿಂದ ಬೆನ್ನಲ್ಲಿ ಬುಟ್ಟಿಕೊಂಡು ಇಳಿ ಸಂಜೆಯವರೆಗೂ ನಿಂತು ನಿಂತು ಮರಗಟ್ಟಿಹೋದ ಕಾಲುಗಳಿಂದ ತಮ್ಮ ಹೊಟ್ಟೆ ಪಾಡಿಗಾಗಿ ಮೂಕಪಶುಗಳಂತೆ ದುಡಿಯಬೇಕು ಒಳನಾಡಿನ ದಟ್ಟಗಾಡಿನ ಅಂಧಕಾರದಲ್ಲಿ. ಎಳೆಯ ಗಿಡಗಳ ಆರೈಕೆ ಮಾಡಿ, ಸುಳಿ ಚಿಗುರಿದ ಪಾಲನೆ ಮಾಡಿ ಅವುಗಳಿಗೆ ಮಾತೆಯ ವಾತ್ಸಲ್ಯ ತೋರಬೇಕು.

ಮಲೆನಾಡು ಪ್ರದೇಶಗಳಲ್ಲಿ ಈ ತೋಟಗಳಲ್ಲಿ ಕೆಲಸಮಾಡುವ ಕೃಷಿಕಾರ್ಮಿಕರಲ್ಲಿ ಅರ್ಧಕ್ಕಿಂತಲೂ ಹೆಚ್ಚು ಮಂದಿ ಮಹಿಳೆಯರೇ. ಸಸಿಗಳು ಬೆಳೆದು ಗಿಡವಾಗುವಂತೆ ನೋಡಿಕೊಳ್ಳುವ ಹೊಣೆ ಸಾಮಾನ್ಯವಾಗಿ ಪುರುಷರದೇ ಆದರೂ ಅನೇಕ ಕೆಲಸಗಳಲ್ಲಿ ಮಹಿಳೆಯರು ನೆರವುನೀಡುತ್ತಾರೆ. ಗಿಡಗಳ ಪಾತಿಗೆ ಗೊಬ್ಬರವನ್ನು ಹೊತ್ತು ತಂದು ಹಾಕುವದು, ಪುರುಷರು ಮರಹತ್ತಿ ಕಾಯಿ ಕಿತ್ತಾಗ ಅದನ್ನು ಆರಿಸಿಕೊಂಡು ಹೋಗಿ ರಾಶಿಮಾಡುವುದು, ಅಡಿಕೆ ಸುಲಿಯುವುದು, ಬೇಯಿಸುವುದು, ಕಾಫಿ,

ಗೋಡಂಬಿಗಳನ್ನು ಒಣಗಿಸುವುದು, ರಬ್ಬರ್ ಮರದಿಂದ ಹಾಲು ಸಂಗ್ರಹಿಸುವುದು ಇವೆಲ್ಲವೂ ಸಾಮಾನ್ಯವಾಗಿ ಮಹಿಳೆಯರ ಕೆಲಸವೇ, ಕಾಫಿಕ್ಯೂರಿಂಗ್ ವರ್ಕ್ಸ್‌-ಗಳಲ್ಲೂ ಮಹಿಳೆಯರು ದುಡಿಯುತ್ತಾರೆ.

ಕೃಷಿಕಾರ್ಮಿಕ ಮಹಿಳೆಯರು ಕೃಷಿಕೆಲಸದಲ್ಲಿ ತೊಡಗುವುದುಮುಖ್ಯವಾಗಿ ಅವರ ಕುಟುಂಬದ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ. ಸಾಮಾನ್ಯವಾಗಿ ಬ್ರಾಹ್ಮಣ ಜಾತಿಯಲ್ಲಿ ಪುರುಷರೂ ಸಹ ಮಣ್ಣಿನ ದುಡಿತದಿಂದ ದೂರವಿರುತ್ತಾರೆ. ಇವಕ್ಕೆ ಕಾರಣ ಬ್ರಾಹ್ಮಣರು ನೇಗಿಲು ಹಿಡಿಯಬಾರದೆಂಬ ನೆಪ, ಪರಿಸ್ಥಿತಿ ಹೀಗಿರುವಾಗ ಈ ಜಾತಿಯಲ್ಲಿ ಮಹಿಳೆಯರು ಹೊಲಗದ್ದೆಗಳಲ್ಲಿ ಬಂದು ದುಡಿಯುವುದು ಅಪರೂಪದ ಮಾತು. ಆದರೆ ಕೆಲವು ಭಾಗಗಳಲ್ಲಿ ಬ್ರಾಹ್ಮಣ ಪುರುಷರು ತೋಟಗಳಲ್ಲಿ ಕೆಲಸ ಮಾಡುವುದುಂಟು. ಲಿಂಗಾಯಿತ ಒಕ್ಕಲಿಗ, ಹರಿಜನ ಮುಂತಾದ ಜಾತಿಯ ಬಡ ಮತ್ತು ಮಧ್ಯಮ ರೈತ ಕುಟುಂಬಗಳ ಮಹಿಳೆಯರು, ಕೃಷಿ ಕೆಲಸಗಳನ್ನು ಮಾಡಲು ಹಿಂಜರಿಯುವುದಿಲ್ಲ. ಹಾಗೆಯೇ, ಮುಸ್ಲಿಮ್ ಮಹಿಳೆಯರು, ಕ್ರೈಸ್ತ ಮಹಿಳೆಯರು ಬಡತನದ ಒತ್ತಡದಿಂದಾಗಿ ಕೃಷಿಕೆಲಸಗಳಲ್ಲಿ ತೊಡಗಿರುವುದು ಸಾಮಾನ್ಯ. ಆದರೆ ಯಾವುದೇ ಜಾತಿಯಾದರೂ ಆರ್ಥಿಕವಾಗಿ ಕುಟುಂಬದಲ್ಲಿ ಸುಸ್ಥಿತಿ ಮಾಡುತ್ತಿದ್ದಂತೆಯೆ ಮಹಿಳೆಯರು ಸ್ವಂತಹೊಲಗದ್ದೆಗಳಲ್ಲಿ ದುಡಿಯುವುದನ್ನು ನಿಲ್ಲಿಸಿಬಿಡುತ್ತಾರೆ. ನಕ್ಸರಸ್ಟ ಬಡ ಮತ್ತು ಭೂಹೀನ ಕುಟುಂಬಗಳ ಹೆಣ್ಣು ಮಕ್ಕಳು ಮಾತ್ರ ಜೀವನ ಪರ್ಯಂತವು ದುಡಿಯುತ್ತಲೇ ಹೋಗುತ್ತಾರೆ. ಮದುವೆಗೆ ಮೊದಲು ತಂದೆಗೂ, ಮದುವೆಯನಂತರ ಪತಿಗೂ ಇವರ ಆದಾಯ ದಕ್ಕುತ್ತದೆ.

ಒಟ್ಟಿನಲ್ಲಿ ಕೃಷಿ ಕಾರ್ಮಿಕ ಮಹಿಳೆ ಕೇವಲ ಪತಿಗೆ ದಾಸಿಯಾಗಿ, ಮಕ್ಕಳಿಗೆ ತಾಯಿಯಾಗಿ ದುಡಿಯುವುದು ಮಾತ್ರವಲ್ಲದೆ ಜೀವನಾಧಾರವಾದ ಕೃಷಿ ಕಾರ್ಯಗಳ ಹೊರೆಯನ್ನೂ ಹೊರುತ್ತಾರೆ. ಆಹಾರವನ್ನು ಬೆಳೆಯಲೂ ಮಹಿಳೆ ಬೇಕು. ಗ್ರಾಮೀಣ ಮಹಿಳೆ ಕೃಷಿ ಕಾರ್ಯಗಳ ಬಹುಪಾಲು ಭಾರವನ್ನು ಹೊತ್ತರೂ ಅದು ಉತ್ತು ಬಿತ್ತಿ ಕುಯಲು ಮಾಡುವವರಿಗೆ ಮಾತ್ರ ಸೀಮಿತ. ಅದರ ಮುಂದಿನ ಕಾರ್ಯಗಳಲ್ಲೆಲ್ಲಾ ಅವರು ಕೈ ಹಾಕುವಂತಿಲ್ಲ. ಬೆಳೆಯನ್ನು ಯಾರಿಗೆ ಮಾರಬೇಕು, ಎಷ್ಟು ಬೆಲೆಗೆ ಕೊಡಬೇಕು, ಯಾವ ಮಾರುಕಟ್ಟೆಗೆ ಒಯ್ಯಬೇಕು ಎಂಬುದರ ನಿರ್ಧಾರವೆಲ್ಲಾ ಪುರುಷರದೇ. ಮಂಡಿ, ಮಾರುಕಟ್ಟೆಗಳು ಉತ್ತಮಮನೆತನದ ಹೆಂಗಸರು ಓಡಾಡಲು ತಕ್ಕನಾದ ಸ್ಥಳಗಳಲ್ಲ ಎಂಬ ಪ್ರತೀತಿ ಇರುವುದರಿಂದ ಸಾಮಾನ್ಯವಾಗಿ ಹೆಂಗಸರು ತಮ್ಮ ಫಸಲಿ-ನೊಂದಿಗೆ ಅಲ್ಲಿಗೆ ಹೋಗುವುದಿಲ್ಲ.

(ಮುಂದುವರೆಯುತ್ತದೆ.)

# ಮಹಾ ಶಿವರಾತ್ರಿ

ಪಂ॥ ಕೆ.ಪಿ. ಶಿವಲಿಂಗಯ್ಯ 425–ಎಚ್. "ಕುಮಾರ ನಿಲಯ" ಬೆಂಗಳೂರು–40



ಹಬ್ಬಗಳಲ್ಲೆಲ್ಲ 'ಶಿವರಾತ್ರಿ' ಹಬ್ಬ ಶ್ರೇಷ್ಠವೆಂದು ಭಾರತದಲ್ಲಿ ಭಾವಿಸಲಾಗಿದೆ; ಹಾಗೂ ಬಹು ಶ್ರದ್ಧೆಯಿಂದ ದೇಶಾದ್ಯಂತ ಆಚರಿಸಲಾಗುತ್ತಿದೆ. ವರ್ಷಕ್ಕೊಮ್ಮೆ ಬಹುಳ (ಕೃಷ್ಣ ಪಕ್ಷ) ದಲ್ಲಿ ಬರುವ ಚತುರ್ದಶಿಯಂದು 'ಮಹಾ ಶಿವರಾತ್ರಿ, ಬರುವುದು. ಆದರೆ ಪ್ರತಿ ತಿಂಗಳೂ (ಮಾಸದಲ್ಲಿಯೂ) ಬಹುಳ ಚತುರ್ದಶಿಯಂದು 'ಶಿವರಾತ್ರಿ'ಯೇ; ಅದನ್ನು ಮಾಸ ಶಿವರಾತ್ರಿ ಯೆಂದು ಹೆಸರಿಸಲಾಗಿದೆ.

'ಶಿವ' ದೇವರು, ಆತನನ್ನು ಧ್ಯಾನಿಸುವ ರಾತ್ರಿ "ಶಿವರಾತ್ರಿ" ಯೆಂದು ಹೇಳುವುದಾದರೂ 'ಶಿವ' ಎಂದರೆ ಸಾಮಾನ್ಯವಾದ ಅರ್ಥ ಒಳ್ಳೆಯದು 'ಮಂಗಳ ಕರ' 'ಶಾಶ್ವತ' ಎಂದು 'ಸತ್ಯಂ–ಶಿವಂ–ಸುಂದರಂ ಎನ್ನುವುದೇ ಇದಕ್ಕೆ ನಿದರ್ಶನ.

ಯಾವುದು ಸದಾಕಾಲ ಇರುವಂತಹುದೋ, ಯಾವುದು ಸರ್ವದಾ ಮಂಗಳ ಕರವಾದುದೋ, ಯಾವುದು (ಎಂದಿಗೂ ಮಲಿನವಾಗದ) ಸುಂದರ ವಾಗಿರುವುದೋ ಅದು 'ಶಿವ' ಎನ್ನಿಸಿಕೊಳ್ಳುವುದು. ಅಂತಹ ಒಳ್ಳೆಯದನ್ನು ಧ್ಯಾನಿಸುವುದು ಯಾರಿಗೆ ಬೇಡ? 'ಮಹಾ ಶಿವರಾತ್ರಿ' ಯ ಬಗೆಗೆ ಪ್ರಾಚೀನಕಾಲದಿಂದಲೂ ಹೇಳ ಬಂದಿರುವ ಒಂದು ಪ್ರಸಂಗವುಂಟು.

ಒಂದು ಸಲ ಮಾಘಮಾಸದ ಚತುರ್ದಶಿಯಂದು ಬೇಟೆಗಾರನೊಬ್ಬ ಬೇಟೆಯಾಡಲು ಬೆಳಗ್ಗೆಯೇ ಹೊರಟನು. ಅಂದು ಆತನಿಗೆ ಯಾವ ಮೃಗವೂ ಸಿಕ್ಕಲಿಲ್ಲವಾಗಿ, ಇಡೀ ದಿನ ಉಪವಾಸ ಮಾಡಬೇಕಾಯಿತು. ಆದರೆ ಅತನಿಗೆ ಏನೇ ಆಗಲಿ ಒಂದು ಮೃಗವನ್ನಾದರೂ ಬೇಟೆಯಾಡಬೇಕೆಂಬ ಛಲ; ಕತ್ತಲಾದರೂ ಚಿಂತೆಯಿಲ್ಲ ಬೇಟೆಯ ಕಾರ್ಯವನ್ನು ಮುಂದುವರಿಸಬೇಕೆಂದು ಕಾಡಿನಲ್ಲಿದ್ದ ಒಂದು ಮರವನ್ನು ಹತ್ತಿ ಕುಳಿತ ಅದು ಒಂದು ಬಿಲ್ವವೃಕ್ಷ; ಕೆಳಗಡೆ ಓಡಾಡುವ ಪ್ರಾಣಿಗಳು ಕಾಣಲೆಂದು ಮರೆಯಾಗಿದ್ದ ಆ ವೃಕ್ಷದ ಕೊಂಬೆ ರೆಂಬೆಗಳನ್ನು ಆಗಾಗ ಕಡಿಯುತ್ತಲೇ ಇದ್ದ. ತನ್ನ ಬಲೆಯನ್ನು ನೀರಿನಲ್ಲಿ ನೆನೆಸಿದ್ದುದರಿಂದ ಅ ಬಲೆಯಿಂದ ನೀರು ತೊಟ್ಟಿಕ್ಕುತ್ತಲೇ ಇತ್ತು. ಆ ವೃಕ್ಷದಡಿ ಭೂಗತವಾಗಿದ್ದ 'ಶಿವಲಿಂಗ' ದ ಮೇಲೆ ಆ ನೀರೂ, ಬಿಲ್ವಪತ್ರೆಯೂ ಇಡೀ ರಾತ್ರಿ ಬೀಳುತ್ತಲೇ ಇದ್ದುದರಿಂದ ಅಯಾಚಿತವಾಗಿ ಆ ರಾತ್ರಿ 'ಶಿವಪೂಜೆ'

ಆದಂತೆಯೇ ಆಯಿತು. ಬೆಳಕು ಹರಿಯುವಾಗ್ಗೆ ಅಂದರೆ ಮಹಾಮಂಗಳಾರತಿ ಆಗುವ ಸಮಯಕ್ಕೆ ಸರಿಯಾಗಿ ಆತನ ಬಾಯಿಂದ 'ಶಿವ-ಶಿವಾ' (ಬೇಟೆ ಸಿಕ್ಕಲಿಲ್ಲವಲ್ಲಾ) ಎಂಬ ಶಬ್ದವೂ ಹೊರಬಿತ್ತು. ಅಷ್ಟುಹೊತ್ತಿಗೆ 'ಶಿವ-ಪೂಜೆ ಪೂರ್ತಿಯಾದಂತಾಯ್ತು. ಶಿವನು ಪ್ರತ್ಯಕ್ಷನಾಗಿ ಆತನಿಗೆ ಮೋಕ್ಷವನ್ನು ಕರುಣಿಸಿದನು. ಇದು ಶಿವರಾತ್ರಿ-ಮಹಾತ್ಮ್ಯವನ್ನು ಕುರಿತಾದ ಪುರಾಣದ ಹೇಳಿಕೆ.

ಯಾವುದೋ ಲೌಕಿಕ ತೃಷ್ಣಗಾಗಿ ಮಾಡಿದ ಉಪವಾಸ ಹಾಗು ಉದ್ದೇಶರಹಿತವಾಗಿ ಸಂದ ಪೂಜೆ ಆದಿನದ (ಶಿವರಾತ್ರಿಯ)ಮಹಿಮೆಯಿಂದ ಹಿಂಸೆಯೇ ವೃತ್ತಿಯಾಗಿ-ಉಳ್ಳ ಬೇಟೆಗಾರನಿಗೆ 'ಶಿವಸಾಯುಜ್ಯ' ವನ್ನುಂಟು ಮಾಡಿದ್ದಾರೆ, ನಿಜವಾಗಿಯೂ ಪರಮಾತ್ಮನನ್ನು ಕುರಿತು ಉಪವಾಸಾದಿ ವ್ರತದಿಂದ 'ಶಿವರಾತ್ರಿ, ಯ ಜಾಗರಣೆಯನ್ನು ತ್ರಿಕರಣ-ಪೂರ್ವಕವಾಗಿ ಮಾಡುವ ಮಾನವರಿಗೆ ಅದಿನ್ನೆಷ್ಟು ಪುಣ್ಯಫಲ ಪ್ರಾಪ್ತಿಯಾಗಲಿಕ್ಕಿಲ್ಲ? ಅದು ಕಾರಣ ಪ್ರತಿಮಾಸದ ಕೃಷ್ಣಪಕ್ಷದ 'ಮಾಸಶಿವರಾತ್ರಿ' ಹಾಗೂ ಮಾಘಬಹುಳ ಚತುರ್ದಶಿಯ 'ಮಹಾಶಿವರಾತ್ರಿ' ಆಚರಣೆ ಮಾನವರಿಗೆ ಅತ್ಯಂತ ಶ್ರೇಷ್ಠವೆಂದು ಬಹಳ ಕಾಲದಿಂದ ನಡೆದು ಬಂದಿದೆ.

ಸಾಮಾನ್ಯವಾಗಿ ಫೆಬ್ರವರಿ ತಿಂಗಳಿನಲ್ಲಿ (ಒಮ್ಮೆ ಮಾರ್ಚಿಯಲ್ಲಿ) ಬರುವ ಮಹಾ ಶಿವರಾತ್ರಿಯಲ್ಲಿ ಒಂದು ವಾರ ಕಾಲ, ಕೆಲವಡೆ ಒಂದು ತಿಂಗಳು ಪೂರ್ತಿ ಆಸೇತು – ಹಿಮಾಚಲ ಪರ್ಯಂತ ಭಾರತದ ನೂರಾರು ಕ್ಷೇತ್ರಗಳಲ್ಲಿ 'ಜಾತ್ರೆ' ನಡೆಯುವುದುಂಟು ನಮಗೆ ತಿಳಿದ ಮಟ್ಟಿಗೆ ಶ್ರೀ ಸಿದ್ಧಗಂಗಾ ಕ್ಷೇತ್ರದ [ಸಿದ್ಧಲಿಂಗೇಶ್ವರ,– ಶ್ರೀ ಸುತ್ತೂರು ಕ್ಷೇತ್ರದ ಶಿವರಾತ್ರೀಶ್ವರ, ಶ್ರೀ ಮಲೆಯ ಮಾದೇಶ್ವರ, ಶ್ರೀ ಕಪ್ಪಡಿ ಕ್ಷೇತ್ರ ಮೊದಲಾದೆಡೆಗಳಲ್ಲಿ ಅತ್ಯಂತ ವಿಜೃಂಭಣೆಯಿಂದ ಅನ್ಯಭಕ್ತಿ ಭಾವದಿಂದ ಜಾತ್ರೆಗಳು ನಡೆಯುತ್ತಿವೆ ಬಹುಕಾಲದಿಂದ.

ಹರಿಹರಕವಿ ಬಸವಣ್ಣನವರನ್ನು ಚಿತ್ರಿಸುವ 'ರಗಳೆ' (ಪದ್ಯ) ಕಾವ್ಯದಲ್ಲಿ 'ನಿಚ್ಚ ನಿಚ್ಚಂ ಶಿವರಾತ್ರಿ' ಎಂದು ಹೇಳುವುದನ್ನು ನೋಡಿದರೆ ಭಕ್ತಿಯಿಂದ ದೇವರನ್ನು ಧ್ಯಾನಿಸುವ ಅರ್ಥಾತ್ ಆತ್ಮಚಿಂತನೆಮಾಡುವ ಪ್ರತಿರಾತ್ರಿ ಪ್ರತಿಘಳಿಗೆಯೂ 'ಶಿವರಾತ್ರಿ, ಯೇ ಎಂದರೆ ಅತಿಶಯೋಕ್ತಿಯಲ್ಲ. ಆದರೆ ಲೌಕಿಕ ವ್ಯವಹಾರದಲ್ಲಿ ಮುಳುಗಿರುವ ಸಾಮಾನ್ಯ ಮಾನವ ಸಮುದಾಯಕ್ಕೆ ಇಂತಹ 'ಮಹಾ ಶಿವರಾತ್ರಿ' ಸಮಯವಾದರೂ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳುವ ಶುಭಾವಸರವಾಗುವುದಾದರೆ ಜನ್ಮ ಸಾರ್ಥಕವಾದೀತು.

[ಮಹಾ ಶಿವರಾತ್ರಿ ಸಂದರ್ಭದಲ್ಲಿ ಶ್ರೀ ಸಿದ್ಧಗಂಗಾ ಜಾತ್ರೆಯಲ್ಲಿ ರಾಸುಗಳ ಪರೀಷೆಯೊಂದಿಗೆ ರೈತರಿಗೆ ಕಾರ್ಮಿಕರಿಗೆ ಅನುಕೂಲವಾಗುವಂತೆ ವಸ್ತುಪ್ರದರ್ಶನವನ್ನೇರ್ಪಡಿಸುತ್ತಿರುವುದು ಜೊತೆಯಲ್ಲಿ ಭಕ್ತಿಪ್ರಧಾನ ಶಿವಕಥೆ, ಪುರಾಣ ಶ್ರವಣಗಳು ಗ್ರಾಮಾಂತರ ಪ್ರದೇಶದ ಬಂಧುಗಳಿಗೆ ತಿಳಿವನ್ನುಂಟು ಮಾಡುವುದಾಗಿದೆ]

ಫೆಬ್ರವರಿ, 1983

# ಬಿಲ್ವವೃಕ್ಷ ಮಹಿಮೆ

ಎಂ. ಸಿದ್ಧಪ್ಪ, ರಿ॥ ಸ್ಕೂಲ್ ಮಾಸ್ಟರ್, ಅಂಬಲಗೆರೆ, ದೊಡ್ಡಬಳ್ಳಾಪುರ ತಾಲ್ಲೂಕು.

ಪರಮೇಶ್ವರನ ಪೂಜೆ (ಲಿಂಗಪೂಜೆ) ಗೆ ಎಲ್ಲಾ ಹೂ ಪತ್ರೆಗಳಿಗಿಂತಲೂ ಮೂರು ದಳದ ಬಿಲ್ವಪತ್ರೆಯು ಬಹಳ ಶ್ರೇಷ್ಠವಾದದು. ಈಶ್ವರನಿಗೆ ಬಿಲ್ವಪತ್ರೆ, ವಿಷ್ಣುವಿಗೆ ತುಲಸಿ ಬಹಳ ಪ್ರಿಯು.

ಮಾಘ ಬಹುಳ ಚತುರ್ದಶಿಯ ಮಹಾ ಶಿವರಾತ್ರಿಯ ದಿವಸ ಭಕ್ತಿಯಿಂದ ಉಪವಾಸ ಜಾಗರಣೆಯಿಂದ ಬಿಲ್ವ ಪತ್ರೆಯಿಂದ ಪರಮೇಶ್ವನ ಪೂಜೆಯನ್ನು ಯಥಾಪತ್ತಾಗಿ ನಡೆಸಿದರೆ ಮುಕ್ತಿದಾಯಕವಾದ ಫಲ ದೊರೆಯುತ್ತದೆಂದು ಪ್ರತೀತಿಯಿದೆ. ಸಂಶಯವಿಲ್ಲ.

### ಬಿಲ್ವದಳಾರ್ಚನಕ್ರಮುಃ

ತ್ರಿದಳಂ ತ್ರಿಗುಣಾಕಾರಂ ತ್ರಿಣೇತ್ರಂಚ ತ್ರಿಯಾಯುಧಂ।
ತ್ರಿಜನ್ಮ ಪಾಪಸಂಹಾರಂ ಮೇಕ ಬಿಲ್ವಂ ಶಿವಾರ್ಪಣಂ॥
ಶ್ರೀ ಶಿವಲಿಂಗ ಮೂರ್ತಯೇನಮುಃ ಬಿಲ್ವದಳಂ ಸಮರ್ಪಯಾಮಿ

ಅಚ್ಛಿದ್ರೈರ್ಬಿಲ್ವ ಪತ್ರೈಶ್ಚ ತ್ರಿಶಂಖೈಃ ಕೋಮಲೈಶ್ಶುಭೈಃ।
ತವ ಪೂಜಾಂ ಕರಿಷ್ಯಾಮಿ ಹ್ಯೇಕ ಬಿಲ್ವಂ ಶಿವಾರ್ಪಣಂ॥
ಶ್ರೀ ಶಿವಲಿಂಗಮೂರ್ತಯೇನಮುಃ ಬಿಲ್ವದಳಂ ಸಮರ್ಪಯಾಮಿ

ದರ್ಶನಂ ಬಿಲ್ವವೃಕ್ಷಸ್ಯ ಸ್ಪರ್ಶನಂ ಪಾಪನಾಶನಂ।
ಅಘೋರಂ ಪಾಪ ಸಂಹಾರಂ ಮೇಕಬಿಲ್ವಂ ಶಿವಾರ್ಪಣಂ॥
ಶ್ರೀ ಶಿವಲಿಂಗಮೂರ್ತಯೇನಮುಃ ಬಿಲ್ವದಳಂ ಸಮರ್ಪಯಾಮಿ

ಕಾಶಿಕ್ಷೇತ್ರ ನಿವಾಸಂಚ ಕಾಲಭೈರವ ದರ್ಶನಂ।
ಪ್ರಯಾಗೇ ಮಾಧವಂ ದೃಷ್ಟ್ವಾ ಹ್ಯೇಕ ಬಿಲ್ವಂ ಶಿವಾರ್ಪಣಂ॥
ಶ್ರೀ ಶಿವಲಿಂಗಮೂರ್ತಯೇನಮುಃ ಬಿಲ್ವದಳಂ ಸಮರ್ಪಯಾಮಿ

ತುಲಸೀ ಬಿಲ್ವ ನಿರ್ಗುಂಡೀ ಜಂಬೀರಾಮಲಕಂ ತಥಾ।
ಪಂಚ ಬಿಲ್ವಮಿತಿಖ್ಯಾತಾ ಮೇಕಬಿಲ್ವಂ ಶಿವಾರ್ಪಣಂ॥

ತಟಾಕಂ ಧನನಿಕ್ಷೇಪಂ ಬ್ರಂಹಸ್ಥಾಪ್ಯ ಶಿವಾಲಯಂ।
ಕೋಟಿ ಕನ್ಯಾ ಮಹಾದಾನ ಮೇಕ ಬಿಲ್ವಂ ಶಿವಾರ್ಪಣಂ॥

ಹಸ್ತಶ್ಚ ಕೋಟಿ ದಾನಾನಿ ಅಶ್ವಮೇಧ ಶತಾನಿಚ ।
ಕೋಟಿ ಕನ್ಯಾಮಹಾದಾನ ಮೇಕಬಿಲ್ವಂ ಶಿವಾರ್ಪಣಂ॥

ಸಾಲಗ್ರಾಮ ಸಹಸ್ರಾಣಿ ವಿಪ್ರಾನಂ ಶತಕೋಟಿಕಂ ।
ಯಜ್ಞ ಕೋಟಿ ಸಹಸ್ರಾಣಿ ಚೈಕ ಬಿಲ್ವಂ ಶಿವಾರ್ಪಣಂ॥

ಅಜ್ಞಾನೇನ ಕೃತಂ ಪಾಪಂ ಜ್ಞಾನೇನಾಪಿ ಕೃತಂಜಯಾತ್।
ನಾಶಿವಾಯಾತು ತತ್ಸರ್ವ ಮೇಕ ಬಿಲ್ವಂ ಶಿವಾರ್ಪಣಂ॥

ಏಕೈಕ ಬಿಲ್ವಪತ್ರೇಣ ಕೋಟಿ ಯಜ್ಞಫಲಂಭವೇತ್।
ಮಹಾದೇವಸ್ಯ ಪೂಜಾರ್ಥಂ ಮೇಕಬಿಲ್ವಂ ಶಿವಾರ್ಪಣಂ॥

ಅಮೃತೋದ್ಭವ ವೃಕ್ಷಸ್ಯ ಮಹಾದೇವ ಪ್ರಿಯಸ್ಯಚ।
ಮುಚ್ಯಂತೇ ಕಂಟಕಾ ಘಾತಾತ್ಕಂಟಕೇಭ್ಯೋಹಿ ಮಾನವಾಃ॥

ಬಿಲ್ವವೃಕ್ಷ ಮಹಿಮೆಯನ್ನು ತಿಳಿಯಲು "ಶಿವರಹಸ್ಯವೆಂಬ ಗ್ರಂಥ" ವನ್ನು ಓದಬೇಕು. ಅದನ್ನು ನೋಡಿರುವವರಿಗೆಲ್ಲ ತಿಳಿದಿರುತ್ತದೆ. ಆಸ್ಥಾನ ವಿದ್ವಾನ್ ಗಂಗಾಧರ ಶಾಸ್ತ್ರಿಗಳು ಬರೆದಿರುವ "ಶಿವರಹಸ್ಯ" ಎಂಬ ಗ್ರಂಥವನ್ನು ಎಲ್ಲರೂ ಓದಬೇಕು.

ಮೂರು ದಳಗಳ ಪತ್ರೆಯನ್ನು ಲಿಂಗಪೂಜೆಗೆ ಭಕ್ತಿಯಿಂದ ಅರ್ಪಿಸಿದರೆ ಇಷ್ಟು ಅಮೋಘವಾದ ಫಲವಿರುವಾಗ, ಅನೇಕರು ಪೂಜೆಗೆ ಉಪಯೋಗಿಸುವ ಬಿಲ್ವಪತ್ರೆಗಳನ್ನು ಕೊಡುವ ಬಿಲ್ವವೃಕ್ಷಗಳನ್ನು ಬೆಳಸಿದರೆ ಫಲವೆಷ್ಟೆಂಬುದನ್ನು ಯೋಚಿಸುವ ಮೂಲಕ ವೃಕ್ಷಗಳನ್ನು ಬೆಳಸಿರುವುದಲ್ಲದೆ. ಬೆಳಸತಕ್ಕವರಿಗೆ ಕುಂಡ ಗಳಲ್ಲಿ ಸಸಿಗಳನ್ನು ಬೆಳಸಿರುತ್ತೇನೆ. ಹಾಲಿ ಎರಡು ವರ್ಷಗಳ ಸಸಿಗಳಗನ್ನು ಪ್ಲಾಸ್ಟಿಕ್ ಕುಂಡಗಳಲ್ಲಿ ಬೆಳೆಸಿವೆ. ಇವುಗಳನ್ನು ಉಚಿತವಾಗಿ ಕೊಡುವುದಲ್ಲದೆ ಬೆಳಸಲು ಸಹಾಯಧನವಾಗಿ ಒಂದೊಂದು ಸಸಿಗೆ ಐದುರೂಪಾಯಿನಂತೆ ಕೊಡುತ್ತೇವೆ. ಈ ಸಸಿಗಳಲ್ಲದೆ ಹೊಸ ಬಿತ್ತನೆ ಮಾಡಿರುತ್ತೆ. ಅವನ್ನು ಸಹ ಕುಂಡದಲ್ಲಿ ಬೆಳಸಿ-ಕೊಡುತ್ತೇವೆ. ಬಿಲ್ವವೃಕ್ಷಾಭಿಮಾನಿಗಳು ಈ ಮೇಲಿನ ವಿಳಾಸದ ಲೇಖಕರವರೊಂದಿಗೆ ಸಹಕರಿಸಿ ಸಸಿಗಳನ್ನು ಪಡೆದು. ವೃಕ್ಷಗಳನ್ನು ಬೆಳಸಿ ಪುಣ್ಯಗಳಿಸಬೇಕಾಗಿ ಪ್ರಾರ್ಥಿಸುವ.

# ಅಂಧರ ಬಂಧು ಡಾ: ರಿಚರ್ಡ್ ಇ. ಹೂವರ್

ಭಾರತ ಸರ್ಕಾರದ ವಾರ್ತಾ ಶಾಖೆ ಬೆಂಗಳೂರು.

ಮಾನವನ ಇಂದ್ರಿಯಗಳಲ್ಲಿ ದೃಷ್ಟಿಗೆ ಮಹತ್ವದ ಸ್ಥಾನ. ದೃಷ್ಟಿ ಕಳೆದು ಕೊಂಡವರಿಗೆ ಎಲ್ಲವೂ ಕತ್ತಲು. ಅವರ ಬಾಳು ಮಾತ್ರವಲ್ಲ ಪ್ರಪಂಚವೇ ಅವರಿಗೆ ಕತ್ತಲು. ಮನುಷ್ಯನ ಸಂಚಾರ ಚಟುವಟಿಕೆ ಹಾಗೂ ಅಸ್ತಿತ್ವಕ್ಕೆ ಅಂಧತ್ವ ದೊಡ್ಡ ಪೆಟ್ಟು. ಆದರೆ ಇಂದು ಅಂಧರಿಗೆ ಈ ಜಗತ್ತು ಅಂಧಕಾರವಾಗಿಯೇ ಉಳಿದಿಲ್ಲ. ಅವನು ಸಮಾಜಕ್ಕೆ ಹೊರೆಯಾಗಿಲ್ಲ. ಕುರುಡರ ಕತ್ತಲ ಬಾಳಿನಲ್ಲಿ ಬೆಳಕನ್ನು ಕಾಣಿಸಿದ ವ್ಯಕ್ತಿ ಅಮೇರಿಕಾದ ಡಾ: ರಿಚರ್ಡ್ ಇ. ಹೂವರ್.

ಸಮಾಜದಲ್ಲಿ ಎಲ್ಲಾ ಚಟುವಟಿಕೆಗಳಲ್ಲಿ ಅಂಧರು ಇಂದು ಭಾಗವಹಿಸುತ್ತಿದ್ದಾರೆ. ನಮ್ಮ ಸಮಾಜದಲ್ಲಿ ಕುರುಡರು ಒಂದು ಬಿಳಿ ಉದ್ದನೆಯ ಕೋಲನ್ನು ನೆಲಕ್ಕೆ ಬಡಿಯುತ್ತಾ ಮುನ್ನಡೆಯುವ ದೃಶ್ಯ ಕಾಣಬಹುದಲ್ಲವೇ ? 1945 ರಲ್ಲಿ ರಿಚರ್ಡ್ ಹೂವರ್ ತನ್ನ ಬಿಳಿ ಕೋಲನ್ನು ಸಂಶೋಧಿಸಿ ಕುರುಡರ ಅಂಧಕಾರವನ್ನು ದೂರ ಮಾಡಿದರು. ಅವರ ಅದ್ವಿತೀಯ ಕೊಡುಗೆಯನ್ನು ಪ್ರಪಂಚದಾದ್ಯಂತ ಪ್ರತಿ ವರ್ಷ ಸ್ಮರಿಸಲಾಗುತ್ತಿದೆ. ಅಕ್ಟೋಬರ್ 15. 'ಬಿಳಿ-ಕೋಲಿನ' ದಿನವನ್ನಾಗಿ ಆಚರಿಸಲಾಗುತ್ತಿದೆ.

ಡಾ: ರಿಚರ್ಡ್ ಹೂವರ್ ಅವರ ಬಿಳಿ ಕೋಲಿನಲ್ಲಿ ಪ್ರಪಂಚದಾದ್ಯಂತ ಕುರುಡರು ತಮ್ಮ ಕಣ್ಣನ್ನು ಕಂಡುಕೊಂಡಿರುವರು. ಕುರುಡರು ಮನೆಯಲ್ಲಿಯೇ ಪ್ರಪಂಚವನ್ನು ಕಾಣುತ್ತಿದ್ದ ಕಾಲವೊಂದು ಇತ್ತು. ಇವರಂತೆ ಅವರು ಸಮಾಜದಲ್ಲಿ ಅಡ್ಡಾಡಲು ಸಾಧ್ಯವಿಲ್ಲ. ಕೆಲಸಕ್ಕೆ ಹೋಗುವ ಪ್ರಮೇಯವೇ ಇಲ್ಲ. ಆದರೆ ಈಗ ಚಿತ್ರ ಬದಲಾಗಿದೆ. ಕುರುಡರು ಕೂಡಾ ಸಮಾಜದಲ್ಲಿ ಸ್ವತಂತ್ರ ಜೀವನ ನಡೆಸುವಂಥಾಗಿದೆ.

1945ರ ಮೊದಲು ಕುರುಡರು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಚಲಿಸಲು ದೊಣ್ಣೆ ಅಥವಾ ಕುರುಬನ ಬೆತ್ತವನ್ನು ಉಪಯೋಗಿಸುತ್ತಿದ್ದರು. ತಮ್ಮ ಪ್ರಯಾಣದ ಅವಧಿಯಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದರು. ನಿಗದಿತ ಸ್ಥಳಕ್ಕೆ ಸರಿಯಾಗಿ ತಲುಪುತ್ತಿರಲಿಲ್ಲ. ಕುರುಡರು ಕುಂಟು ಜೀವನ ನಡಸುತ್ತಿದ್ದರು.
ದ್ವಿತೀಯ ಮಹಾಯುದ್ಧದ ಸಮಯವದು. ಡಾ: ರಿಚರ್ಡ್ ಇ. ಹೂವರ್ ಅಂಧ ಸೈನಿಕರೊಂದಿಗೆ ಕೆಲಸ ಮಾಡುತ್ತಿದ್ದರು. ಅಮೇರಿಕನ್ ಸೇನೆಯ ಸಾರ್ಜಂಟ್ ಹೂವರ್ ಅಂಧರ ಸಮಸ್ಯೆಗಳನ್ನು ತೀವ್ರವಾಗಿ ಅಭ್ಯಸಿಸಿ ಕೊನೆಗೆ ಒಂದು ಕ್ರಮಬದ್ಧವಾದ ವೈಜ್ಞಾನಿಕ ರೀತಿಯ ಪರಿಹಾರ ಕಂಡು ಹಿಡಿದರು.

ಸುಮಾರು 8 ರಿಂದ 10 ಔನ್ಸ್ ಭಾರವಿರುವ ಉದ್ದನೆಯ ಅಲ್ಯೂಮಿನಿಯಂ ಬಿಳಿಯ ಕೋಲು ಡಾ: ರಿಚರ್ಡ್ ಇ. ಹೂವರ್ ಕಂಡು ಹಿಡಿದ ಉಪಕರಣ, ಅಮೇರಿಕಾದ ಹಿರಿಯರ ಅಡಳಿತಾಧಿಕಾರಿ ಅಸ್ಪತ್ರೆ ಹೈನ್ಸ್‌ನಲ್ಲಿ ಅವರು ಉಪಕರಣಗ ಗಳನ್ನು ತಯಾರಿಸುವರು. ಪರಿಸ್ಥಿತಿಯ ಬಗ್ಗೆ ಅರಿವು ಮತ್ತು ಚಲನೆ ಕಾರ್ಯಕ್ರಮ ವನ್ನು ಕೂಡ ಅದರೊಂದಿಗೆ ಆರಂಭಿಸುವರು.

1960 ರಲ್ಲಿ ಬೂಸ್ತನ್ ಕಾಲೇಜ್ ಮತ್ತು ವೆಸ್ಟನ್ ಮಿಗಾನ್ ವಿಶ್ವವಿದ್ಯಾನಿಲಯಗಳು ಈ ವಿಷಯಗಳಲ್ಲಿ ಪದವಿ ಕೋರ್ಸ್‌ಗಳನ್ನು ಆರಂಭಿಸಿತು. ಇತರ ಹಲವಾರು ಕಾಲೇಜುಗಳು ಕೂಡಾ ಕೋರ್ಸ್‌ಗಳನ್ನು ಆರಂಭಿಸಿದವು. ಈ ಕೋರ್ಸ್‌ನಲ್ಲಿ ಅಂಧರಿಗೆ ಕೆಲವು ಉಪಯುಕ್ತ ಮಾಹಿತಿಗಳನ್ನು ತಿಳಿಸಲಾಗುತ್ತದೆ. ವಾತಾವರಣದ ಕೆಲವು ಸುಳಿವು ಅಥವಾ ಕುರುಹಿನ ಆಧಾರದ ಮೇಲೆ ಅಂಧರಿಗೆ ಪಾಠ ಹೇಳಿಕೊಡ-ಲಾಗುತ್ತಿದೆ. ಮುಖ್ಯವಾಗಿ ಶಬ್ದ ಸುವಾಸನೆ ವಸ್ತು ಉಷ್ಣಾಂಶ ಮೊದಲಾದವುಗಳು ಇವರ ನೆರವಿಗೆ ಬರುತ್ತದೆ

ಡಾ: ಹೆಲ್ಲೆನ್ ಕೆಲ್ಲರ್ ಅವರ ಅಧ್ಯಕ್ಷತೆಯಲ್ಲಿ ಸಾಗರದಾಚೆಯ ಅಮೇರಿಕಾದ ಅಂಧರ ಪ್ರತಿಷ್ಠಾಪನೆ ಉಗಮವಾಯಿತು. ಏಷ್ಯಾ ಖಂಡದಲ್ಲಿ ಕೂಡಾ ಅಂಧರ ಸೇವೆ ಮೊದಲು ಈ ಸಂಸ್ಥೆ ನಿರ್ಧರಿಸಿತು. ಅದರಂತೆ ಮಲೇಶಿಯಾದ ರಾಜಧಾನಿಯಾದ ಕೌಲಲಂಪುರದಲ್ಲಿ ತರಬೇತಿ ಶಿಬಿರ ಆರಂಭಿಸಿದರು. ಹಲವಾರು ಭಾರತೀಯರು ಕೂಡಾ ಶಿಬಿರದದಲ್ಲಿ ಭಾಗವಹಿಸಿ ಅಂಧರಿಗೆ ಪಾಠ ಹೇಳಿಕೊಡುವ ಕಲೆಯನ್ನು ಕರಗತ ಮಾಡಿಕೊಂಡರು.

ದೃಶ್ಯಹೀನ ಅಂಗವಿಕಲರ ಸಮಸ್ಯೆ ಮತ್ತು ಅವರ ಬವಣೆಗಳನ್ನು ಅರಿತ ಸರ್ಕಾರ ಅವರ ನೆರವಿಗೆ ಬರಲು ನಿರ್ಧರಿಸಿತ್ತು. 1971 ರಲ್ಲಿ ಭಾರತ ಸರ್ಕಾರದ ಸಮಾಜ ಕಲ್ಯಾಣ ಸಚಿವಾಲಯ ಇಲಾಖೆಯು ಡೆಹ್ರಾಡೂನ್‌ನಲ್ಲಿ ದೃಶ್ಯ ಹೀನ ಅಂಗವಿಕಲರಿ-ಗಾಗಿ ರಾಷ್ಟ್ರೀಯ ಸಂಸ್ಥೆಯನ್ನು ಪ್ರಾರಂಭಿಸಿತು. ಇಲ್ಲಿ ಕುರುಡರಿಗೆ ಸಮಾಜದಲ್ಲಿ ಸ್ವತಂತ್ರವಾಗಿ ಬಾಳುವ ಬಗ್ಗೆ ತರಬೇತಿ ನೀಡಲಾಗುತ್ತಿದೆ. 16 ವಾರಗಳ ತರಬೇತಿಯ ಬಳಿಕ ಅಂಧರು ಕೂಡಾ ನಮ್ಮ ರಾಷ್ಟ್ರಪ್ರವಾಹದಲ್ಲಿ ಪ್ರಮುಖರಾಗಿ ಬೆರೆತು ಬಲಿಷ್ಠ ರಾಷ್ಟ್ರಕಟ್ಟುವಲ್ಲಿ ತಮ್ಮದೇ ಆದ ಕಾಣಿಕೆ ಸಲ್ಲಿಸುತ್ತಿದ್ದಾರೆ.

ಶ್ರೀಮತಿ ಅಪ್ಟೆ ಮಿಲ್ಕಾ ಕ್ರಾಪರ್ಥ ಭಾರತದ ಅಂಧರ ವಿದ್ಯಾರ್ಥಿಗಳ ಹೆಸರಾಂತ ಅಧ್ಯಾಪಕಿ. ಶ್ರೀ ಮತಿ ಕ್ರಾಕರ್ಥ ಅಮೇರಿಕಾದ ಫ್ಲೋರಿಡಾ ಅಂಧ ಮತ್ತು ಮೂಕರ ಶಾಲೆಯಲ್ಲಿ ತಮ್ಮ ತರಬೇತಿಯನ್ನು ಪಡೆದಿದ್ದರು.

ದೃಷ್ಟಿ ಶಕ್ತಿಯನ್ನು ಕಳೆದುಕೊಂಡಲ್ಲಿ ಎಲ್ಲವನ್ನು ಕಳೆದುಕೊಂಡಂತೆ. ಆದರೆ ಸಮಾಜದ ಜನರಿಂದ ಸ್ವಲ್ಪ ಸಹಾಯ ಸಿಕ್ಕಿದ್ದಲ್ಲ ಮುಂದೆ ಬರಬೇಕೆಂಬ ಮನೋಭಾವ ಅವರಲ್ಲಿ ಇದ್ದಲ್ಲಿ ಅವರೂ ಜನ ಸಾಮಾನ್ಯರಂತೆ ಬಾಳಬಹುದಾಗಿದೆ. ಪ್ರಕೃತ್ತಿದತ್ತವಾದ ಅಮೂಲ್ಯ ವಸ್ತುಗಳ ಮಹತ್ವ ಅವರ ಗೈರು ಹಾಜರಿಯಲ್ಲಿ ಮಾತ್ರ ಅನುಭಕ್ಕೆ ಬರುತ್ತದೆ. ಹಾಗಾಗಿ ನಾವು ಈ ಅಂಗವಿಕಲರನ್ನು ಬೊಟ್ಟು ಮಾಡಿ ಅವಹೇಳನ ಮಾಡುವ ಪ್ರವೃತ್ತಿ ಬಿಟ್ಟು ಅವರಿಗಾಗಿ ಸಹಾಯ ಮಾಡುವ ಮನೋಧರ್ಮ ಬೆಳೆಸಬೇಕಾಗಿದೆ.

ನಮ್ಮ ಯಾವುದಾದರೂ ಒಂದು ಪ್ರಯತ್ನ ಇಡೀ ಅಂಗವಿಕಲ ಸಮುದಾಯದ ಚಿತ್ರವನ್ನೇ ಬದಲು ಮಾಡಬಹುದು. ಡಾ: ರಿಚರ್ಡ್ ಇ. ಹೂವರ್ ಅವರ ಪ್ರಯತ್ನ ಇದಕ್ಕೆ ಸಾಕ್ಷಿ.

**ಬಸವ ಸಮಿತಿ–ಬಸವ ಭವನ, ಬಸವೇಶ್ವರ ರಸ್ತೆ, ಬೆಂಗಳೂರು.**

## ಗೊತ್ತುವಳಿ

ಯಾವ ಶರಣಧರ್ಮ ದೀನದಲಿತರ ಉದ್ಧಾರಕ್ಕಾಗಿ ಕಂಕಣಬದ್ಧವಾಯಿತೋ, ಅಸ್ಪೃಶ್ಯತಾ ನಿವಾರಣೆಗಾಗಿ ಅತ್ಯಂತ ಪ್ರಾಮಾಣಿಕವಾಗಿ ಶ್ರಮಿಸಿತೋ, ಎಲ್ಲ ಬಗೆಯ ಸಾಮಾಜಿಕ ಅಸಮಾನತೆಗಳ ವಿರುದ್ಧವಾಗಿ ಧ್ವನಿಯೆತ್ತಿತ್ತೋ ಅದೇ ಧರ್ಮದ ಕೆಲವು ಅನುಯಾಯಿಗಳಾದ ಕೆಲವರು, ಇಂದು ಬೆಂಡಿಗೇರಿ, ಮದಕಿನಹಾಳ, ಕುದುರೆಮೋತಿ ಇತ್ಯಾದಿ ಹಲವಡೆಗಳಲ್ಲಿ ದಲಿತರ ಮೇಲೆ ನಡೆಸುತ್ತಿರುವ ದೌರ್ಜನ್ಯವನ್ನೂ, ಅತ್ಯಾಚಾರ ಹಾಗೂ ಅಮಾನುಷ ಹಲ್ಲೆಗಳಲ್ಲಿ ತೊಡಗಿರುವುದನ್ನೂ, ತಾ.2.1.88 ರಂದು ಬಸವ ಸಮಿತಿಯ ಆಶ್ರಯದಲ್ಲಿ (ನಡೆದ) ಬಸವಣ್ಣನವರನ್ನು ಕುರಿತ ವಿಚಾರ ಸಂಕಿರಣದಲ್ಲಿ ಉಗ್ರವಾಗಿ ಖಂಡಿಸಿದೆ. ಮತ್ತು ಈ ಬಗೆಯ ಅಕೃತ್ಯಗಳು ಪುನರಾವರ್ತನೆಯಾಗದಂತೆ, ತಡೆಗಟ್ಟುವ ಕಾರ್ಯದಲ್ಲಿ ಕನ್ನಡಿಗರೆಲ್ಲರೂ ಸಹಕರಿಸಬೇಕೆಂದು ವಿನಂತಿಸಿಕೊಂಡಿರುತ್ತದೆ.

ಬಸವ ಸಮಿತಿಯ ಪರವಾಗಿ
ಅನ್ನದಾನಯ್ಯ ಪುರಾಣಿಕರು.

# ಭಾರತಾಂಬೆಯ ಹೃದಯ ಕಂಪಿಸಿತು

## (ಸತ್ಯಾವತರಣ ಗೀತಾಮೃತ)

ಶ್ರೀ ಪೋಟಗಿ ಮಲ್ಲಿಕಾರ್ಜುನ "ಕನ್ನಡ ಕವಿ ಕಾಳಿದಾಸ" ಅಥಣಿ

ಭಾರತದ ಭವಣೆಯನು ಕೇಳ್ವರಾರಿಂದು
ಕ್ರೂರ ಸ್ವಾರ್ಥರಕ್ಕಸಿಯೆ ಕುಣಿವಳೆಲ್ಲೆಲ್ಲೂ
ಭಾರವಾಗಿಹುದು ಜನಕೋಟಿ ಬೆಳೆದು ನಿಂದು
ಪಾರುಗಾಣುವುದೆಂತೊ ಧರ್ಮ ಪ್ರಲಯದಂಚಿನಲ್ಲಿ ! ॥ 1 ॥

ಅಧಿಕಾರ ಲಾಲಸೆಯೆ ತುಂಬಿ ನಿಂದಿದೆ ನೀತಿ ಇನ್ನೆಲ್ಲಿ ?
ಮದಗಜದವೋಲ್ ಮದವೇರಿ ನಿಂದಾಗ ಶಾಂತಿ ಮುದವಿನ್ನೆಲ್ಲಿ ?
ಹೃದಯ ಪ್ರೀತಿ ವಿಶ್ವಾಸವೆಲ್ಲವೂ ಬತ್ತಿ ಹೋದವು ಏನೋ ?
ಸದಯ ಸಂಪದವಳಿದ ಜನಕೋಟಿ ತೇಲುತಿದೆ ರಕ್ತ ಪ್ರವಾಹದಲ್ಲಿ ! ॥ 2 ॥

ಭೂದೇವಿ ಕಂಪಿಸಿದಳು ಭೂ ಭಾರವನು ತಡೆಯದಿಂದು
ಸಾಧು ಸಂತ ಶರಣರು ಬೇಸತ್ತು ಬಲಿದಾನಗೆಯ್ದರು ತಮ್ಮ ಆತ್ಮವನ್ನು
ಆದರೂ ಬಾರದಾಗಿದೆಯಿಂದು ಭಾರತದ ಜನಕೆ ಸದ್ಬುದ್ಧಿ ಸುವಿವೇಕ
ಕಾದು ನಿಂದಿಹ ಮಹಾಮೃತ್ಯವಂ ಕಾಣ್ವರಾರೊ ಪ್ರಲಯದಬ್ಬರದಲ್ಲಿ ! ॥ 3 ॥

ಸಾರತಮವಾಗಿರ್ದ ಭಾರತದ ಕೀರ್ತಿ ಕಲಶ ಕಪ್ಪಾಗ ಬೇಕೇ ?
ಯಾರು ಹೇಳುವರೆಲ್ಲ ಬರಿಬಾಯಿ ಮಾತಿನಾ ಸುರಿಮಳೆಗರೆವರೆಲ್ಲ
ದೂರು ಸರಿದಾಚೆಗುಳಿದಿಹವು ಧರ್ಮಕೃತಿ ಕಾರ್ಯಗಳೆಲ್ಲ ! ಇನ್ನೇನು
ಯಾರು ಬಲ್ಲರೊ ಭಾರತದ ಭವಿಷ್ಯವೇನೆಂಬುದನ್ನು ! ॥ 4 ॥

ಇನ್ನಾದರೂ ನೀವು ತಿಳಿಯ ಬನ್ನಿ ಮಾನವತೆಯಾ ಮೌಲ್ಯವನ್ನು
ಚೆನ್ನಕೇಶವನಾಣೆ ಸತ್ಯಾಸತ್ಯತೆಗಳಾ ಪರೀಕ್ಷಾ ಕಾಲವೀಗ
ಮುನ್ನ ಜಾತಿ ಕುಲವೆಂದಡೆ ಮನುಜ ಕುಲ ವೊಂದೆಯಲ್ತೆ ?
ಅನ್ನ ವಸ್ತ್ರ ಅರ್ಥ ಜಲ ವಾಯು ಭೂಮ್ಯಾಕಾಶಗಳೆಲ್ಲ ಜೀವನಿತ್ತ ಸಮ ದಾನವಲ್ತೆ ॥5॥

ಗುತ್ತಿಗೆಯ ಹಿಡಿವಣ್ಣಗಳಾ ಕತ್ತುಗಳೆ ಹಾರಿಯಾವು ! ಎಚ್ಚರಿಕೆ !
ಸತ್ತು ಹೋಗದಿರಿ ನೀವು ಸುಮ್ಮನೆ ಮಾನವತೆಯನು ಮರೆತು ಮಸಣಕ್ಕೆ ?
ಸತ್ಯ ಪ್ರಾಮಾಣಿಕತೆ ಪ್ರೇಮ ತೋರಿ ! ವಿಶ್ವಾಸ ಬೀರಿ ! ದಯೆದೋರಿ !
ಮತ್ತೆ ಭಾರತದ ಭವಿಷ್ಯ ದುಜ್ವಲತೆಗೆ ಒಂದಾಗಿ ನಾವೆಲ್ಲ ಶ್ರಮಿಸೋಣ ಬನ್ನಿ ॥ 6 ॥

ಒಂದೆಡೆಗೆ ಅನ್ನದಾಕ್ರೋಶ ! ಇನ್ನೊಂಸೆಡೆಗೆ ಅನ್ನನಾಶ ! ಘೋಲೆ ನೃತ್ಯವಿನಾ ಅಟ್ಟಹಾಸ !
ಹಿಂದಿರದ ಬಡವ ಬಲ್ಲಿದ ಭೇದ ಇಂದೇಕೆ ನಮ್ಮೀ ಭಾರತದಲ್ಲಿ ! ಏಕೀ ವಿಷಮತೆ ?
ಚೆಂದಾಗಿ ನಾವೆಲ್ಲ ಒಂದೆಂಬ ಭಾವದಲಿ ಎಂದೆದೂ ನಲಿದಾಡಿ ಕಲೆಯೋಣ !
ಬಂದಿರ್ದ ಭವಣೆಯನು ಕಳೆಯೋಣ ! ಭಾರತದ ಕೀರ್ತಿ ಇಳೆಗೆ ಬೆಳಗೋಣ ! ||7||

ಕಳ್ಳ ಪೇಟಿಯ ಕದೀಮರನು ದಳ್ಳುರಿಗೆಸೆದಾರು ಕ್ರಾಂತಿ ಕಹಳೆಯಲ್ಲಿ !
ಒಳ್ಳೆಯರನು ಕಂಡಾಗದವರನು ಚಂಡಾಡಿಯಾರು ಎಚ್ಚರಿಕೆ ! ಎಚ್ಚರಿಕೆ !
ತಳ್ಳಬೇಡಿ ಸಿರಿಯ ಮದದಿ ನೀವು ದೀನದಲಿತರನು ! ನಿರ್ದಯವಾಂತು !
ಒಳ್ಳೆಯತನವಿರಲಿ ಸರ್ವರಲಿ ಸಮಭಾವವಿರಲಿ ! ಪರೋಪಕಾರವಿರಲಿ ! || 8 ||

ಆಗಸದಿ ಯುಗ ಯುಗಗಳಿಂ ಲೋಕ ಬೆಳಗುವಾ ಸೂರ್ಯ ಚಂದ್ರರು ಬದಲಾಗದಿರಲು!
ಭೋಗ ಲಾಲಸೆಯಿಂದಿಂತು ಆದೆನಿತು ಬದಲಾಗಿಹುದೊ ನಾಕಾಣೆ ಹೀನ ಮನುಕುಲ!
ಈಗ ಸಹಿಸಲಾಗದ್ದೆ ಕೂಗುತಿಹವು ಆ ಬಲಿದಾನ ಗೆಯ್ದಾತ್ಮಗಳೆಲ್ಲ ಶಂಕರನಬಳಿ ಪೋಗಿ!
ಸೋಗಿನಾ ಕ್ರೂರ ಜನತೆಯಾ ವಿಲಾಸ ವಿಭ್ರಮಗಳನೆಲ್ಲ ಮೋಸ ವಂಚನೆಯಾ ಕೃತಿಗಳನೆಲ್ಲ ! || 9 ||

ಗಗನ ಮಂಡಲದಾಚೆಯಿಂದಾ ಪರಬ್ರಹ್ಮನಾಳದಿಂದ ಮಹಾ ಶಕ್ತಿಯೊಂದು
ಝುಗ ಝುಗಿಸುತೀ ಪೃಥ್ವಿಗಿಳಿದು ಬಂದಿಹುದು ! ಎಚ್ಚರಿಕೆ ಮಾನವಾ ಎಚ್ಚರಿಕೆ!
ಬಗೆ ಬಗೆಯ ಭಂಡರನೆಲ್ಲ ಹಾರಿಸಿ ಹುಡಿಗೆಯ್ದು ತೂರುವಳು ಜೊಳ್ಳು ಧಾನ್ಯದಂತೆ!
ಹಗೆತನದ ಹವಣವನು ಹರಿದು ಚೆಲ್ಲಿ! ದೇವಿ ನಿಲ್ಲುವಳು ಸತ್ಯ ಸಾಕ್ಷಾತ್ಕಾರದಲ್ಲಿ ||10||

ಧೀಂಕಿಡುವಾ ದಿಕ್‌ತಟಗಳೆಲ್ಲ ಆಗ ಹರ್ಷಮಳೆಗರೆದಾವು! ದಿವ್ಯಶಕ್ತಿಯಕಂಡು!
ಝೇಂಕರಿಪಾ ಮುಗಿಲ್ ಮಿಂಚಿನಾ ಸಿಡಿಲಿನಾರ್ಭಟ ಶಾಂತವಾದೀತು! ಬ್ರಹ್ಮಾಂಡಲ್ಲಿ!
ಓಂಕಾರ ಬಸವಪ್ರಣವನಾದ ಸರ್ವತ್ರದಲ್ಲಿ ತುಂಬಿ ಮೊಳಗೀತು! 'ದೇವರಾಜ್ಯ'ವಾದೀತು
ಶಂಕರನ ಚಿತ್‌ಶಕ್ತಿ ಸೌಭದ್ರೆ ಪೃಥ್ವಿಯಲಿನಿಂದು ಅಮೃತಬಿಂದು ಸುರಿದಾಳು !||11||

ಶೋಕಗ್ರಸ್ತಳೆನೆ ಭಾರತಾಂಬೆಯು ಮತ್ತೆ ಹರ್ಷವಾಂತು ನಗುತಲಿಹಳಂದು!
ಕಾಕು ಜನತೆಯು ಕಾಟ ಆಗಿಲ್ಲ! ಭಾವೈಕ್ಯಸದ್ಧರ್ಮ ಶರಣಸಂಚಯ ಪರ್ವಕಾಲ :
ಐಕ್ಯ ಭಾವದಿ ಸಕಲ ಸಂಪದ ಸೇರಿ ಬಂಗಾರ ಬಾಳುವೆಯಾಗ ಭವ್ಯಭಾರತಕೆ !
ನಾಕಸುಖವಿಲ್ಲಿ ಬಂಧುಗಳೆ ಬನ್ನಿ ! ಇಂದುಧರನಾಣೆ ಸತ್ಯವನೆ ಸಾರಿದನಿಂದು "ಕನ್ನಡ ಕವಿ ಕಾಳಿದಾಸ" !||12||

# ರವೀಂದ್ರರ ದೃಷ್ಟಿಯಲ್ಲಿ ಭಾರತದ ಸಂಸ್ಕೃತಿ

ಡಾ|| ಟಿ.ಎನ್. ಮಹಾದೇವಯ್ಯ.

ಪ್ರಥಮ ಸಾಮರವ ತವ ತಪೋವನೆ
ಜ್ಞಾನಧರ್ಮ ಹಿತಕಾವ್ಯ ಕಾರಿಣಿ, ಎಂದು ಹಾಡಿ ಹೊಗಳಿರುವರು.

ಭರತ ಖಂಡದ ಜೀವನಾಡಿ ಧರ್ಮ ಸತ್ಯ ಧರ್ಮಗಳನ್ನು ಬಿಟ್ಟು ನಮ್ಮಲ್ಲಿ ರಾಜಕೀಯವಿಲ್ಲ, ನ್ಯಾಯವಿಲ್ಲ, ಮತವಿಲ್ಲ, ಸಾಹಿತ್ಯವಿಲ್ಲ, ಸಂಸ್ಕೃತಿಯಿಲ್ಲ, ಕೊನೆಗೆ ರಾಜಕೀಯ ಈ ಸತ್ಯ ಧರ್ಮಗಳ ಹಿನ್ನಲೆಯಲ್ಲಿ ಉಳಿದಿದ್ದರೂ ಅದನ್ನು ಒಂದುಗೂಡಿಸಿ ಸ್ವರ ಸಮ್ಮೇಳನಗೈಸಿ ಅಹಿಂಸೆಯ ಸಂಗೀತ ಹಾಡಿದವರು ಭರತ ಖಂಡದ ದರಿದ್ರಸನ್ಯಾಸಿ ಬಾಪೂಜಿ. ಅವರ ನಿಷ್ಠಾಪೂರ್ಣ ನಂಬಿಕೆ.........

"For me Politics bereft of religion are absolute dirt, but to be shunned. Politics concerns nations and that which concerns welfare of nation must be one of the concern of a man who is religiously Inclined, in otherwords a seeker after God and truth."

—Mahatma Gandhi

ಅವರ ಸ್ವಾತಂತ್ರ್ಯಸಮರ ಒಂದು ತ್ಯಾಗಪೂರ್ಣ ಯಜ್ಞ! ಅದರಲ್ಲಿ ದಬ್ಬಾಳಿಕೆಗೆ ಸಿಲ್ಕಿ ಮೂಡಿದ ಹುತಾತ್ಮರಿದ್ದಾರೆ. ತ್ಯಾಗದ ಬಲಿದಾನವಿದೆ! ರಕ್ತತರ್ಪಣವಿದೆ ಆದರೆ ಸೇಡಿಗಾಗಿ ಕೊಲೆಗಾಗಿ ಪ್ರತಿಹಿಂಸೆಗಾಗಿ ಆಶಿಸಿದ ರಕ್ತದಾಹವಿಲ್ಲ. ಹೋರಾಟದ ಫಲವಾಗಿ ಭಾರತದ ಶೃಂಖಲೆ ಕಳಚಿಬಿದ್ದವು. ಅದೊಂದು ರಾಜಕೀಯ ವೈಚಿತ್ರ್ಯ. ಮದ್ದಿಲ್ಲದೆ, ಗುಂಡಿಲ್ಲದೆ, ಸಮರ ಸನ್ನಾಹಗಳಿಲ್ಲದೆ, ಹೋರಾಡುವ ಯೋಧರಿಲ್ಲದೆ ಸಾಧಿಸಿದ ವಿಜಯ! ಅಹಿಂಸೆಯ ಜಯಭೇರಿ! ಧರ್ಮಧ್ವಜಾರೋಹಣ! ಸತ್ವ ಶಕ್ತಿಗೆ ರಾಜಸಿಕ ತಾಮಸಿಕ ಗುಣಗಳು ಶರಣು ಬಂದವು. ಇಷ್ಟೊಂದು ಪ್ರಗಾಢವಾದ ನೀತಿಯ ಧರ್ಮದ ಸತ್ಯದ ಹಿನ್ನಲೆಯಲ್ಲಿ ಭಾರತವರ್ಷದ ಸ್ವಾತಂತ್ರ್ಯದ ರೂಪುರೇಷೆಗಳು ಆಕೃತಿ ತಳೆದವು. ಈ ಸ್ವಾತಂತ್ರ್ಯದ ಘೋಷಣೆಯಾಗಿ ಇಂದಿಗೆ ಅನೇಕ ವರ್ಷಗಳು ತುಂಬಿದವು. ಪೂರ್ಣ ಸ್ವಾತಂತ್ರ್ಯದ ಅರಿವು ಮನುಷ್ಯನಿಗಾಗಬೇಕು. ಉಚ್ಛಂಕಲ ವ್ಯಕ್ತಿತ್ವ ಸ್ವಾತಂತ್ರ್ಯವಲ್ಲ! ಅರಾಜಕತೆಗೆ ಅದು ಪರ್ಯಾಯ ನಾಮವಲ್ಲ. ಶಿಸ್ತು ಸಂಯಮಗಳ ಕಟ್ಟುನಿಟ್ಟುಗಳನ್ನು ಕಿತ್ತು ಬಿಸುಡಿದ ಸ್ವಾತಂತ್ರ್ಯವಲ್ಲ! ಅವ್ಯವಸ್ಥೆಯ ವ್ಯವಸ್ಥೆಯಿರಬೇಕು. ಸ್ವಾತಂತ್ರ್ಯದಲ್ಲಿ ಸಂಯಮಬೇಕು. ನೀತಿಯಿರಬೇಕು, ನಿಯಮವಿರಬೇಕು. ಆಡಳಿತ ಸೂತ್ರದ ಹಿಡಿತದಲ್ಲಿ ದೇಶದ ದಿನಚರಿಯ ರಚನೆಯಾಗಬೇಕು.

ಅದಕ್ಕಾಗಿ ಏರ್ಪಟ್ಟಿತು. ಭಾರತದ ರಾಜ್ಯಾಂಗ! ರಾಜ್ಯಾಂಗ ಉದಯವಾಗಿ ಜನ ಜೀವನಕ್ಕಿಳಿದು ಆಡಳಿತ ಸೂತ್ರಗಳನ್ನು ಹರಿಬಿಟ್ಟ ಪುಣ್ಯದಿನವೇ ಗಣರಾಜ್ಯಾದಿನಾ ಚರಣೆ.......... 26 ಜನವರಿ 1950.

ಜೀವನ ಅನಂತ ಮುಖಿ. ಬಾಳಿಗೆ ಆದಿಶೇಷನ ನಾಲಿಗೆಗಳಿವೆ. ಅದರ ಹಸಿವಿನ ಬೆಂಕಿಗೆ ಸಕಲ ವಿಶ್ವವೇ ಆಹಾರವಾಗಬೇಕು. ಅದರ ಸಾಂಸ್ಕೃತಿಕ ಮುನ್ನಡೆ ಸಾಹಿತ್ಯಬೇಕು. ಸಂಗೀತಬೇಕು, ಕುಶಲ ಕಲೆಗಳು ಬೇಕು. ಧರ್ಮಬೇಕು. ನೀ ಬೇಕು. ಬೇಕು-ಬೇಕು- - ಬೇಕು. ಪ್ರತಿಯೊಂದೂ ಬೇಕು. ಸಾಕೆಂಬ ಶಬ್ದ ಇಂಬಿಲ್ಲವಾಗಿ ಬೇಕುಗಳ ತೌರು ಬದುಕು ಈ ಬದುಕು ಬರಿ ವ್ಯಕ್ತಿಯೊಬ್ಬನದಲ್ಲ ಕೋಟಿ ಕೋಟಿ ಬಾಯುಳ್ಳ ಕೈಯುಳ್ಳ, ಒಡಲುಳ್ಳ, ಬುದ್ಧಿಯುಳ್ಳ, ಕಲಾತ್ಮ ಹೃದಯಗಳ ಎಪ್ಪತ್ತು ಕೋಟಿ ಬದುಕಿನ ಬೃಹತ್ ಸಮಸ್ಯೆ.... ನಾಯಕರು ದುಡಿ ದ್ದಾರೆ. ದುಡಿಯುತ್ತಿದ್ದಾರೆ. ಅಹರ್ನಿಶಿ ತಮ್ಮದೆಲ್ಲವನ್ನು ಈ ದೇಶದೇವಿಗೆ ಒ ತಂದಿದ್ದಾರೆ; ತೆತ್ತಿದ್ದಾರೆ, ತೆರುತ್ತಿದ್ದಾರೆ........ ಜ್ಞಾನಿಗಳು, ವಿಜ್ಞಾನಿಗಳು, ಕುಶ ಕಲಾ ಪ್ರಮುಖರು, ತಜ್ಞರು, ಪ್ರಾಜ್ಞರು ........ ಹೀಗೆ ಎಷ್ಟೋ ಮಂದಿ...... ಆಚಾರ್ಯ ವಿನೋಬನಿಂದ ಹಿಡಿದು ಬಡಕೂಲಿಯ ತನಕ ಈ ಬೃಹತ್ ಸಮಸ್ಯೆಯ ಒಂದಲ್ಲ ಒಂದು ರೀತಿಯಲ್ಲಿ ನಿರ್ವಹಿಸಲು ಭಾರತವರ್ಷದ ಅಖಂಡ ಮಾನ ಕೋಟಿ ಸೆಣಸುತ್ತಿದೆ-ಹೆಣಗುತ್ತಿದೆ.... ಜಾತಿ ಮತ ಪಂಥಗಳನ್ನು ಸುರಿದು ಪ್ರತಿ ಬಿಂ ನೆತ್ತರನ್ನು ಸವೆದು....ದುಡಿಯುತ್ತಿದೆ. ವಿಜ್ಞಾನ ಪುರುಷನ ಕೃಪೆ ದೊರಕಿದೆ. ಪ್ರಕೃ ತನ್ನ ರಹಸ್ಯ ಹೊರಗೆಡವಿದೆ....ಆಕಾಶ ಭೂಮಿ ಜಲಗಳಲ್ಲಿರುವ ವಿಪುಲ ಸಂಪತ್ತ ಮನುಷ್ಯನ ಪುಟ್ಟಕ್ಕೆಗಳುಮೂಲ ಶತಧಾರೆಯಾಗಿ ಸುರಿಯುತ್ತಿದೆ. ದೇಶವೆಲ್ಲ ಒಂದ ಕಾರ್ಖಾನೆಯಾಗಿದೆ....ಕಿವಿ ಬಿರಿಯುವಷ್ಟು ಸದ್ದು! ಕಣ್ಣರಿಯುವಷ್ಟು ದುಡಿಮೆ .. ವಿರಾಮ ಸಿಕ್ಕಿದಷ್ಟು ಹಗರಣ ! ಧೂಳು, ಕಣ, ಹೊಗೆ,...ಕಲ್ಲು-ನೀರು ಸುತ್ತಿ ಹೊಡೆತ ಕಬ್ಬಿಣದ ಪೆಟ್ಟಿನ ಅಣು ಶಕ್ತಿ ಸಂಪಾದನೆಯ ತನಕ ಬಂದಿದೆ. ಬಾವಿ ಕಟ ಕಾಲುವೆ ........ವಿದ್ಯಾಚಕ್ರ ಪ್ರಕಾಶ .... ವಿದ್ಯೆ, ಶಾಲೆ, ಪುಸ್ತಕ ....... ಒಂದ ಮುಖವಲ್ಲ ಈ ನಿರ್ಮಾಣದ ಮುಖ ಆಗಲೇ ತಿಳಿಸಿದಂತೆ ಅನಂತ ಮುಖವಾಗಿ ಸಾಗಿದ

ಸಾಹಿತ್ಯವೂ ಬೆಳೆದಿದೆ ಅಲ್ಲಲ್ಲಿ ಪಾತಿಗಳನ್ನು ಸಣ್ಣ ಬದಿ ಮಾಡಿ ಗಿಡ ನೆಟ್ಟ ನೀರೆರೆದಿದ್ದಾರೆ....... ಗುಣ ಗುಣ ಗಾಯನ ಗೀತ ಬಡ ಹಳ್ಳಿಗಳಿಂದ ಗುಡಿಸಲ ಗಳಿಂದ ಆಕಾಶ ಏರುವ ಸೌಧಗಳವರೆಗೂ ಕೇಳಿ ಬರುತ್ತಿದೆ ಮುಂಬೆಳಗಿನಲ್ಲಿ. ಸಂಜೆ ಶಾಂತಿ ಸನ್ನಿವೇಶದಲ್ಲಿ ಆದರೂ ಈ ದುಡಿಮೆಯ ನಿತ್ಯ ಯಾತ್ರೆಯ ಹಿಂದೆ ಒಂದ ವಿಕಟ ಸ್ವರವಿದೆ. ಈ ಪೂರ್ಣ ಸಂಗೀತದಲ್ಲಿ ಎಲ್ಲೋ ಅಪಸ್ವರ ಕೇಳುತ್ತಿದೆ! ಈ ನೀಲಿಯಾ ವ್ಯಾಪ್ತ ಸೌಂದರ್ಯ ದಡಿ ಒಂದೆರಡು ಕರಿಮುಗಿಲಿವೆ ! .......

ನಾಗರಿಕತೆ, ಸಂಸ್ಕೃತಿಗಳು ಬೆಳೆದಂತೆ ಮಾನವನೂ ಬೆಳೆಯುತ್ತಾನೆ. ಆದರೆ ಹೇಗೆ ಯಾವ ರೀತಿಯಲ್ಲಿ ? ಪತ್ರಿಕೆಗಳು ತೆರೆದರೆ ಈ ಶಿರೋನಾಮೆಗಳು ಬಡತನ ನಿದ್ರೆ.... ಕೊಲೆ .... ಅತ್ಯಾಚಾರ, ದರೋಡೆ ಕಳ್ಳತನ .... ಮಾನವನ ನೈತಿಕ ಜೀವನ ಈ ಸಾಹಸೋದ್ಯಮಗಳು ಮಧ್ಯೆ ಅಧಃ ಪಾತಾಳಕ್ಕಿಳಿಯುತ್ತಿದೆ. ಕೋರ್ಟು ಕಚೇರಿ .... ಲಾಯರ್ .. ಆಸ್ತಿ ಪಾಸ್ತಿ ತಕರಾರು, ನಿತ್ಯ ನಿರಂತರ ಒಬ್ಬನ ರಕ್ತವನ್ನು ಮತ್ತೊಬ್ಬ ಶೋಷಿಸುತ್ತಿರುವ ಚಿರಂತನ ಪ್ರಸಂಗಗಳಿಗೆ ಏನೂ ದಾರಿದ್ರ್ಯವಿಲ್ಲ .... ಧರ್ಮದ ಸಂಕೇತವಾಗಿ ಭಾರತದೇಶ ಪಡೆದ ಸ್ವಾತಂತ್ರದ ಹೆಸರಿನಲ್ಲಿ ಈ ಅತ್ಯಾ-ಚಾರ.... ಈ ಹಿಂಸೆ....ಈ ಅನೀತಿ!...ಯಾರಿದಕ್ಕೆ ಜವಾಬ್ದಾರರು? ಬಾಪೂಜಿಯ ಕನಸಿನ ಸ್ವರಾಜ್ಯವೇ ಇದು?

ಬಾಪೂಜಿ ಹೇಳಿದರು ರಾಷ್ಟ್ರದಲ್ಲಿ ವ್ಯಕ್ತಿಯೇ ಶ್ರೇಷ್ಠ, ವ್ಯಕ್ತಿಯೇ ಸಮಾಜ ಸಮಾಜಕ್ಕಾಗಿ ವ್ಯಕ್ತಿಯಲ್ಲ. ವ್ಯಕ್ತಿಯಲ್ಲಿ ಸುಪ್ತವಾಗಿರುವ ಶ್ರೇಷ್ಠ ದೈವೀಗುಣ-ಗಳನ್ನು ಪ್ರಚೋದಿಸುವುದು ಗಾಂಧೀ ವಾದದ ಗುರಿ. ಪ್ರಸಿದ್ಧ ದಾರ್ಶನಿಕ-Emerson ಹೇಳಿದ:

'Morality is the object of govt.'!

ನೀತಿಯೇ ರಾಷ್ಟ್ರದ ಗುರಿ. ನಮ್ಮ ಹೋರಾಟವೆಲ್ಲ ಸ್ವಾತಂತ್ರ್ಯ ಸಂಪಾದಿಸುವ-ತನಕ. ಸ್ವಾತಂತ್ರ್ಯ ಬಂದ ಮೇಲೆ ನಮ್ಮ ಕರ್ತವ್ಯ ರಾಷ್ಟ್ರವು ಎಲ್ಲ ದೃಷ್ಟಿಯಿಂದ ಸ್ವಯಂ ಪರಿಪೂರ್ಣವನ್ನಾಗಿಸುವುದಷ್ಟೇ ಅಲ್ಲ .... ಎಮರ್ಸನ್ ಹೇಳುವಂತೆ

'The end of all political struggle is to establish morality as the basis of all Legislation.'

ದಾರ್ಶನಿಕ ತತ್ತ್ವಗಳಿರಲಿ ದ್ವೈತಾ ದ್ವೈತಗಳ ಸಾಧನೆಯಿರಲಿ .... ಉಪನಿಷತ್ತು ಘೋಷಿಸುವಂತೆ ಇಂದು ನಮ್ಮ ರಾಷ್ಟ್ರ ನಿರ್ಮಾಣದ ಮಹಾದ್ವಾರದಲ್ಲಿರ ಬೇಕಾದ ಸಾಂಕೇತಿಕ ತತ್ವ !

ಸತ್ಯಂ ವದ ಧರ್ಮಂ ಚರ !

ಅದಕ್ಕಾಗಿಯೇ ಬಸವಣ್ಣನವರು ಮತೋದ್ಧಾರದ ಕಾರ್ಯವನ್ನು ಪ್ರಾಯಶಃ

ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ
ಅನ್ಯರಿಗೆ ಅಸಹ್ಯ ಪಡಬೇಡ ಇದಿರ ಬಣ್ಣಿಸಬೇಡ.
ಪರರ ಹಳಿಯಲಿ ಬೇಡ ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ'

ಎಂದು ಎರಡು ಶುದ್ಧ ಕರಣಗಳಿಂದ ಪ್ರಾರಂಭಿಸಿದರು. ಇಂದಿನ ಸಾಹಸ ಉದ್ಯಮ ಗಳನ್ನು ಕಿವಿ ಕಿವುಡಾಗಿಯೂ ಜನತೆಯ ಕಿವಿಯಲ್ಲಿ ಈ ಬೀಜ ಮಂತ್ರ ಉಚ್ಚರಿಸ

ಬೇಕು. ಈ ಸಾಧನೆ ಕಿರಿದಾದರೂ ಅದರ ಫಲ ಎಂದು ? ಗಾಂಧೀಜಿಯ ರಾಮ ರಾಜ್ಯ ಕನಸಾಗಿದೆಯೋ ? ಅದು ಕನಸಾಗಬೇಕಾದರೆ ಈ ನಿಜ ಹೇಳುವ ಸತ್ಯವನ್ನು ಆಚರಿಸುವ, ಇತರರ ರಕ್ತ ಶೋಷಿಸದ ಜನತೆಯಿಂದ ಆಗಬೇಕು. ಇಷ್ಟಾದರೆ ಸಾಕು. ಕವಿ ಘಾಲಿಬ್ ಹೇಳಿದಂತೆ "ಕಿಟಕಿ ಬಾಗಿಲುಗಳಿಲ್ಲದ ಮನೆಗಳನ್ನು ಕಟ್ಟಬೇಕು." ಪರಸ್ಪರ ವ್ಯಕ್ತಿಯಲ್ಲಿ ನಂಬಿಕೆ ಹುಟ್ಟಬೇಕು. ಆಸ್ತಿ ಪಾಸ್ತಿಯ ಸಮತೆ ಬರಬೇಕು .... ಅದಿಲ್ಲದ ಸಾಧನೆ ಸಾಧನೆಯಲ್ಲ. ಎಮರ್ಸನ್ ಹೇಳುವಂತೆ 'In our barbarous Society the influence of character 5 in its infancy.' ಎಂಬುದು ನಮ್ಮಲ್ಲಿ ಎಲ್ಲರಿಗೂ ಅನ್ವಯಿಸುತ್ತದೆ. ಈ ನೀತಿಯ ದಾರಿದ್ರ್ಯವನ್ನು ಹೋಗಲಾಡಿಸುವ ಆವುದಾದರೂ ಒಂದು ಆಂದೋಳನದ ಅವಶ್ಯಕತೆಯಿದೆ. ಸಮಾಜ ಧರ್ಮದ ಹೆಸರಿನಲ್ಲಿ ಮೋಸ, ದೇವಮಂದಿರಗಳಲ್ಲಿ ದೇವರ ಹೆಸರಿನಲ್ಲಿ ಮೋಸ, ನ್ಯಾಯಾಂಗಗಳಲ್ಲಿ ನ್ಯಾಯದ ಸೋಗಿನಲ್ಲಿ ಮೋಸ! ಧರ್ಮಾಧಿಕಾರಿಗಳು ಧರ್ಮದ ಸೋಗಿನ ಮೋಸ .... ಹಾಗಾದರೆ ಇನ್ನೆಲ್ಲಿ ನ್ಯಾಯ ಇನ್ನೆಲ್ಲಿ ಧರ್ಮ .... ಇನ್ನೆಲ್ಲಿ ದೇವರು ? ಹಾಗೆಂದರೆ ಸರಕಾರ ಜನತೆ ಎಂದು ಇಬ್ಭಾಗ ಮಾಡಿ ನುಡಿವ ಟೀಕೆಯಲ್ಲ. ಜನತೆ ಸರ್ಕಾರ ಒಂದು ಕೈಯಾಗಿದೆ ಈಗ ! ಪ್ರಚಾರ-ರಾಜ್ಯದ ಸಂಕೇತ ಅದು ! ....

ಪೂರ್ಣ ಪ್ರಾಜ್ಞರಾದ ಗ್ರೀಸಿನವರ ಪ್ರಜಾಪ್ರಭುತ್ವ ಎಷ್ಟು ಉನ್ನತ ನೀತಿ ನೆಲೆ-ಗಳನ್ನು ಅನುಸರಿಸಿತು ಆದರೂ ಸಾಕ್ರಟೀಸನಿಗೆ ವಿಷಪಾನ ಮಾಡದಿರಲು ಆಗಲಿಲ್ಲ ... ಅರಿಸ್ಟೈಡಿಸ್‌ಗೆ ದೇಶದಿಂದ ಹೊರ ದೂಡದಿರುವುದು ಆಗಲಿಲ್ಲ.... ಡೆಮಾಸ್ಥನೀಸಗೆ ಸ್ವಯಂ ವಿಷಸೇವನೆಯ ಆತ್ಮಹತ್ಯ ಮಾಡ ಕೊಳ್ಳದಿರಲಾಗಲಿಲ್ಲ........ಕಾರಣ ಎಂದಿನಂತೆ ನೀತಿಯ ದಾರಿದ್ರ್ಯ.

ಸರಕಾರ ಕಾನೂನಿನ ಬಲದಿಂದ ಪ್ರಾಯಶಃ ಇದನ್ನು ಸಾಧಿಸಲಾರ ಜನತೆ ಹೃದಯದಲ್ಲಿ ಈ ನೀತಿಯ ಸೆಲೆ ಒಡೆದು ಮಾಡಬೇಕು. ಈ ಸಮ್ಯಕ್ ಚಿಲುಮೆ ಚಿಮ್ಮಬೇಕು ಧರ್ಮಸಂಗೀತ ಶಕ್ತಿ ಸಂಗ್ರಹ ಮಾನವನ ಹೃದಯದಲ್ಲಿ. ಇದು ಒಂದು ಸಮಾಜ ಮಾಡಬಹುದಾದ ಕೆಲಸವಲ್ಲ. ಒಂದು ದೇಶ ಸಾಧಿಸ ಬಹುದಾದ ಪ್ರಯತ್ನವಲ್ಲ. ಪ್ರತಿ ವ್ಯಕ್ತಿ ಅರಿತು ನಡೆ ನುಡಿಯನ್ನು ತಿದ್ದುಕೊಳ್ಳಬೇಕು. ಇಷ್ಟಾದರೂ ಸಾಕು. ವ್ಯಕ್ತಿಯಿಂದ ಸಮಾಜ ರಚನೆಯಾಗಿದೆ. ವ್ಯಕ್ತಿ ಸುಧಾರಿಸಿದರೆ ಸಮಾಜ ತಾನಾಗಿ ಸುಧಾರಿಸುತ್ತದೆ. ಸ್ವಾಮಿ ರಾಮ ತೀರ್ಥರು ಹೇಳುವಂತೆ.

You raise your personality & you will raise thewhole world

ಸ್ವಾತಂತ್ರ್ಯ ಸಾಧನೆ ಫಲ ಪೂರ್ಣವಾಗಿ ದೊರಕಬೇಕಾದರೆ ಕಾನೂನಿನ ಎಚ್ಚರ ಬಹಳ ಕಡಿಮೆ ಇರಬೇಕು. ಕಾನೂನು ಕಡಿಮೆಯಾಗಬೇಕಾದರೆ ಜನ ನೀತಿ-ವಂತರಾಗಬೇಕು. ಸತ್ಯವಂತರಾಗಬೇಕು, ಸುಸಂಸ್ಕೃತರಾಗಬೇಕು. ಅದೇ ನಮ್ಮ

ಸ್ವಾತಂತ್ರ್ಯವನ್ನು ಉಳಿಸುವ ಜೀವ ಮಾತ್ರ. ಕನಪೂಸಿಯಸ್ ಆಳ್ವಿಕೆಗೆ ಸಿಕ್ಕಿದ ರಾಜ್ಯ ಸಣ್ಣದಾದರೂ ಧರ್ಮದ ಬಲದಿಂದ ಅಜೇಯವಾಗಿತ್ತು. ಅದರ ಸತ್ಯ ಶಕ್ತಿಯನ್ನು ಕುಂದಿಸಲು ಪರರಾಷ್ಟ್ರದವರು ಅಮಿತ ಆಭರಣ ಚಿನ್ನರತ್ನಗಳನ್ನು ನೂರು ಜನ ಸುಂದರ ಸ್ತ್ರೀಯರನ್ನು ದೇಶಕ್ಕೆ ಕಳುಹಿಸಿದರು. ರಾಜನಿಂದ ಹಿಡಿದು ಎಲ್ಲ ಅಧಿಕಾರಿಗಳೂ ವಿಷಯ ಲಂಪಟತನಕ್ಕೆ ಬಲಿಬಿದ್ದರು. ಕನ್‌ಫ್ಯುಸಿಯಸ್ ಕಣ್ಣೀರಿಡುತ್ತಾ ರಾಜ್ಯ ತ್ಯಾಗಮಾಡಿದ ... ಆ ಧರ್ಮದ ಬಲವಿಲ್ಲದಿದ್ದರೆ ರಾಷ್ಟ್ರದ ಶಾಂತಿ ಸ್ಮಶಾನ ಶಾಂತಿ... ರಾಷ್ಟ್ರದ ಸತ್ವ-ಶಕ್ತಿ ಬರಿ ಮರೀಚಿಕೆ ಭ್ರಮೆ. ನಮ್ಮ ಉದ್ಧಾರ ಬರಿ ಕನಸು.

ಸಂಸ್ಕೃತಿಯನ್ನು ಉಳಿಸಿ ಬೆಳಸಿ ಜನ ನೀತಿವಂತರಾದರೆ ಎಮರ್ಸನ್ ಹೇಳುವಂತೆ

That the highest end of the govt. is the Culture of men; and that is men can be educated, the institutions will Share their importance that the moral sentiment will write law of the land.

ದೇಶದ ಕಾನೂನಿನಲ್ಲಿ ನೀತಿಯ ಲೇಖನಿ ಬರೆಯಲು ಪ್ರಾರಂಭಿಸಿದಾಗ ಜನತೆಯ ಹೃದಯದಲ್ಲಿ ತುಷ್ಟಿ' ಪುಷ್ಟಿ ಶಾಂತಿ ನೆಲಸುತ್ತದೆ. ಆದುದರಿಂದ ಈ ಮಹಾಸಾಧನೆಯ ಮೊದಲನೆ ಮಂತ್ರ.

ಸತ್ಯಂವದ ಧರ್ಮಂಚರ - -

ಇಂತಹ ಪವಿತ್ರ ಸೂತ್ರದಿಂದ ಪ್ರತಿಯೊಬ್ಬರೂ ಪ್ರತಿದಿನದ ಸೂರ್ಯೋದಯವನ್ನು ಸ್ವಾಗತಿಸಲಿ.

# ಗ್ರಾಮಾಂತರ ಬಸವ ಜಯಂತಿ

ಹೆಚ್. ವಿ. ವೀರಭದ್ರಯ್ಯ, ಉಪನ್ಯಾಸಕರು ಕನ್ನಡ ವಿಭಾಗ, ಸಿದ್ಧಗಂಗಾ ಕಾಲೇಜು ತುಮಕೂರು.

ಆತ್ಮೀಯ ಶರಣ ಬಂಧು

ಕಣ್ಣೂರು ಮಾಗಡಿ ತಾಲ್ಲೂಕಿನ ಒಂದು ಪುಟ್ಟಗ್ರಾಮ. ಶಿವಗಂಗಾ ಪರಿಸರದಲ್ಲಿ ನೆಲೆಯೂರಿದ ಹಳ್ಳಿ. ರೈತವರ್ಗವೇ ಹೆಚ್ಚು. 'ಕೃಷಿಕೃತ್ಯ ಕಾಯಕ'ದಿಂದ ಜೀವನ. ದೇವರ ಮಕ್ಕಳ ಮಠ ಆ ಗ್ರಾಮದ ಧಾರ್ಮಿಕ ಕೇಂದ್ರ. ವಿರಕ್ತ ಸಂಪ್ರದಾಯದ ಮಠ, ಹಳ್ಳಿಗೆ ಅನತಿ ದೂರದಲ್ಲಿದೆ. ತರುಮರಗಳ ಮಧ್ಯೆ ಪ್ರಶಾಂತ ವಾತಾವರಣದಲ್ಲಿ. ಅಲ್ಲಿ ಬಸವ ಜಯಂತಿಯ ಆಚರಣೆ. ಸಂದರ್ಭ ನೂತನ ಸ್ವಾಮಿಗಳ ಪಟ್ಟಾಧಿಕಾರ ಮಹೋತ್ಸವ. ಶ್ರೀ ಸಿದ್ಧಗಂಗಾ ಮಠದಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ಶ್ರೀ ರೇಣುಕಪ್ಪ ಎಂಬ ವಟುವಿಗೆ ವಿಧ್ಯುಕ್ತವಾಗಿ ಜಂಗಮ ದೀಕ್ಷೆಯನ್ನಿತ್ತು ವಿರಕಾಶ್ರಮ ಅನುಗ್ರಹಿಸಿ ಶ್ರೀ ಶ್ರೀ ಮೃತ್ಯುಂಜಯ ಸ್ವಾಮಿಗಳೆಂಬ ಅಭಿದಾನ ದೊಂದಿಗೆ ಶ್ರೀ ಮಠದ ಉತ್ತರಾಧಿಕಾರವನ್ನು ಹರಗುರು ಚರಮೂರ್ತಿಗಳ, ಭಕ್ತಾದಿಗಳ, ಅಭಿಮಾನಿಗಳ ಸಮ್ಮುಖದಲ್ಲಿ ನೀಡಲಾಯಿತು. ಅಧ್ಯಕ್ಷತೆಯನ್ನು ಪರಮ ಪೂಜ್ಯ ಶ್ರೀ ಶ್ರೀ ಗಳವರು ವಹಿಸಿದ್ದರು.

ಬಸವಣ್ಣನವರ ಸಂದೇಶವನ್ನು ಸಾರುತ್ತ, ಜನಮನಕ್ಕೆ ಮುಟ್ಟಿಸುತ್ತ. ಎಲೆಮರೆಯ ಹೂವಿನಂತಿರುವ ಕಣ್ಣೂರು ಮಠ ಸದ್ದುಗದ್ದಲ ವಿಲ್ಲದ ಸೇವೆಗೆ ಹೆಸರಾದುದು. ಸದ್ಯದ ಹಿರಿಯ ಶ್ರೀ ಶ್ರೀಗಳು ಲಿಂಗನಿಷ್ಠಾಪರರು, ಕಾಯಕಶ್ರದ್ಧೆಯುಳ್ಳವರು. ಬಸವ ಜಯಂತಿಯನ್ನು ಸಿದ್ಧಗಂಗಾ ಶ್ರೀ ಶ್ರೀಗಳ ಆಣತಿಯ ಮೇರೆಗೆ ಹಮ್ಮಿಕೊಂಡರು, ಆನಂದವಾಗಿ ನಡೆಸಿಕೊಟ್ಟರು.

ಸಮಾರಂಭದಲ್ಲಿ ಮಾತನಾಡಿದ ಪೂಜ್ಯ ಶ್ರೀ ಶ್ರೀಗಳಾದ ಬಂಡೇಮಠದ ಶಿವರುದ್ರಸ್ವಾಮಿಗಳು "ಬಸವಣ್ಣನವರ ವಚನಗಳನ್ನು ಅಭ್ಯಾಸ ಮಾಡುವುದರಿಂದ ನಮ್ಮ ಜೀವನದ ಅನೇಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳ ಬಹುದು" ಎಂದರು. "ಕಾಯಕ ಎಂದು ಮಾತನಾಡಿ ಪ್ರಯೋಜವಿಲ್ಲ ಅದು ಆಚರಣೆಯಲ್ಲಿ ಬರಬೇಕು" ಎಂದು ನೆಲಮಂಗಲದ ಪೂಜ್ಯ ಶ್ರೀ ಶ್ರೀ ಗಳಾದ ಸದಾಶಿವಸ್ವಾಮಿಗಳು ನುಡಿದರು. ಮಠ ಮಾನ್ಯಗಳು ಮಾಡಿರುವ ಸೇವೆಯನ್ನು ಜನತೆ, ಸಮಾಜ ಗುರುತಿಸಿದರೆ ಅದರಿಂದ ಸಮಾಜಕ್ಕೇ ಒಳ್ಳೆಯದಾಗುತ್ತದೆ" ಎಂಬುದಾಗಿ ನುಡಿದರು ಕುಣಿಗಲ್ ತಾಲ್ಲೂಕು ಬಿಟ್ಟಳ್ಳಿಮಠದ ಪೂಜ್ಯ ಶ್ರೀ ಶ್ರೀಗಳಾದ ನೀಲಕಂಠ ಶಿವಾಚಾರ್ಯ-

ಸ್ವಾಮಿಗಳು. ಬೇವೂರು ಮಠದ ಶ್ರೀ ಶ್ರೀಗಳಾದ ಪೂಜ್ಯ ಶಾಂತ [illegible] ಸ್ವಾಮಿಗಳು ಮಾತನಾಡುತ್ತ 'ವೀರಶೈವ ನಿರ್ಣಯ ಪರಮಾವತಾರಿ ಬಸವಣ್ಣ', ಪೂರ್ವಾಚಾರ್ಯ ಸಂಗನ ಬಸವಣ್ಣ 'ವಿಶ್ವಗುರು' ಎಂಬುದಾಗಿ ಹೇಳಿದರು. ಅಂಕನಹಳ್ಳಿಮಠದ ಶ್ರೀ ಶ್ರೀಗಳಾದ ಪೂಜ್ಯ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು ನಡೆಸಿಕೊಂಡು ಬರುತ್ತಿರುವ ಗ್ರಾಮಾಂತರ ಬಸವ ಜಯಂತಿ ಹೊಸದೊಂದು ಸುಧಾರಣೆಯನ್ನೇ ತರುತ್ತಿದೆ" ಎಂದರು. ಶ್ರೀ ಮಹಂತೇಶ್ವರ ಗದ್ದಿಗೆಮಠದ ಪೂಜ್ಯ ಶ್ರೀ ಶ್ರೀಗಳು ಹೀಗೆಂದರು"-ಗುರುವಿನ ಅನುಗ್ರಹವಿಲ್ಲದೆ ಯಾವುದನ್ನು ಸಾಧಿಸಲಾಗದು. ಜಂಗಮತ್ವವೆಂಬುದು ಜ್ಞಾನದ ಸಂಕೇತ, ಚಲನ ಶೀಲತೆ ಅದರ ಲಕ್ಷಣ. ಇಂದು ಪಟ್ಟಾಧಿಕಾರ ಪಡೆಯುತ್ತಿರುವ ಶ್ರೀ ಶ್ರೀ ಮೃತ್ಯುಂಜಯ ಸ್ವಾಮಿಗಳು ಗುರುವಿನ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ. ಮಠಕ್ಕೆ ಒಳ್ಳೆಯ ಭವಿಷ್ಯವಿದೆ"-ಎಂದು ನುಡಿದರು. ಪೂಜ್ಯ ಶ್ರೀ ಶ್ರೀ ಶಾಂತವೀರಸ್ವಾಮಿಗಳು ಸಮಾರಂಭದ ಯಶಸ್ಸು ಭಕ್ತರದ್ದು ಎಂದು ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಶ್ರೀ ಸಿದ್ಧಗಂಗಾ ಕಾಲೇಜಿನ ರಾಜ್ಯಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾದ ಶ್ರೀ ಬಿ. ವೀರಭದ್ರಯ್ಯನವರು ಉಪನ್ಯಾಸ ಮಾಡುತ್ತ, 'ದುಡಿದರೆ ಈಕ್ಕೆ ಬಡತನವೇಕ್ಕೆ?' ಎಂಬುದಾಗಿ ದುಡಿಮೆ ಶರಣಧರ್ಮದ ಅಡಿಗಲ್ಲು ಎನ್ನುತ್ತ ದಾಸೋಹಕ್ಕಾಗಿ ಮೂಡಿಬಂದ ಶರಣ ಸಂಪ್ರದಾಯದ ಮಠಗಳ ಪರಿಚಯ ಮಾಡಿಕೊಟ್ಟರು. "ಮಹಿಳೆಯರ ಬದುಕಿನ ಮಂಗಳದ ಬೆಳಕಾಗಿ ಬಂದ ಭಾಗ್ಯ ಬಸವಣ್ಣ, ಸ್ವಾತಂತ್ರ್ಯ ಸಮಾನತೆಗಳನ್ನು ಲಿಂಗಭೇದವಿಲ್ಲದೆ ತಂದುಕೊಟ್ಟ ಮಹಾನುಭಾವ ಬಸವಣ್ಣ" ಎಂದು ಉಪನ್ಯಾಸ ನೀಡಿದವರು ಬೆಂಗಳೂರು ಮಲ್ಲೇಶ್ವರಂ ಸರ್ಕಾರಿ ಪದವಿ ಪೂರ್ವಕಾಲೇಜಿನ ಕನ್ನಡ ಉಪನ್ಯಾಸಕರಾದ ಶ್ರೀಮತಿ, ಬಿ. ಗಂಗಾಂಬಿಕೆಯವರು. ಜನಪದರು ಹೃದಯ ತುಂಬಿ ಹಾಡುವಂತೆ ದೀನ ದಲಿತರಿಗಾಗಿ ದುಡಿದ ಮಾನವತಾವಾದಿಯಾದ ಬಸವಣ್ಣನವರ ಜೀವನವನ್ನು ಪರಿಚಯಿಸುತ್ತ ಬಸವ ಭಕ್ತಿಯ ಬೀಜ, ಬಸವ ಮುಕ್ತಿಯ ತೇಜ, ಬಸವ ಕಾಯಕದ ಗುರು ಬೀಜ – ಎಂದು ಜನಪದರು ಹಾಕಿರುವುದನ್ನು ವಿಶ್ಲೇಷಿದರು ಶ್ರೀ ಹೆಚ್. ವಿ. ವೀರಭದ್ರಯ್ಯನವರು.

ಕಣ್ಣೂರು ಮಕ್ಕಳ ದೇವರ ಮಠದ ನೂತನ ಶ್ರೀ ಶ್ರೀಗಳಾದ ಪೂಜ್ಯ ಮೃತ್ಯುಂಜಯ ಸ್ವಾಮಿಗಳು ಮಾತನಾಡುತ್ತ ನಮ್ಮ ಗುರಗಳ ಅನುಗ್ರಹದಿಂದ ನಿಮ್ಮೆಲ್ಲರ ಆಶೆಯಂತೆ, ಪರಮ ಪೂಜ್ಯ ಶ್ರೀ ಶ್ರೀ ಸಿದ್ಧಗಂಗಾ ಶ್ರೀ ಶ್ರೀಗಳ ಅಪ್ಪಣೆಯ ಮೇರೆಗೆ ನಾವಿಂದು ಶ್ರೀಮಠದ ಸೇವಾ ಮಣಿಹಕ್ಕೆ ನಮ್ಮನ್ನು ಅರ್ಪಿಸಿಕೊಳ್ಳುತ್ತಿದ್ದೇನೆ. ನಮ್ಮನ್ನು ಶ್ರೀ ಗುರು ಕೃಪೆ, ನಿಮ್ಮೆಲ್ಲರ ಆಶೆ ಆಕಾಂಕ್ಷೆಗಳು ನಡೆಸಿಕೊಂಡು ಹೋಗಬೇಕು ಎಂದು ಪ್ರಾರ್ಥಿಸುತ್ತೇವೆ ಎಂದು ನುಡಿದರು.

ಬಸವಣ್ಣನವರು ಆಶಿಸಿದ್ದು ಭಕ್ತರ ಮನೆಗಳೆಲ್ಲ ಮಠಗಳಾಗಬೇಕೆಂದು. ಆದರೆ ಇಂದು ಭಕ್ತರ ಮನೆಗಳು ಬಸವತತ್ವಗಳಿಂದ ದೂರ ಸರಿಯುತ್ತ ಬಂದಿರುವುದನ್ನು

ಗಮನಿಸಿದಾಗ ಮಠಗಳು ತುಂಬ ಪರಿಶ್ರಮ ಪಡಬೇಕಾದ ಅಗತ್ಯವಿದೆ ಎನಿಸುತ್ತದೆ. ಯಾವುದೇ ಮಠ ಮಾನ್ಯಗಳು ರೂಪುಗೊಳ್ಳುವುದು ವೈಯಕ್ತಿಕ ಸುಖ ಲೋಲುಪತ್ತೆಗಾಗಿ ಯಲ್ಲ, ಸಮಾಜ ಸೇವೆಗಾಗಿ, ಧರ್ಮ ವರ್ಧನೆಗಾಗಿ, ಧರ್ಮವೆಂಬುದು ಜೀವನದಿಂದ ಪ್ರತ್ಯೇಕವಾದುದಲ್ಲ, ಜೀವನವನ್ನೇ ಶಿವಯೋಗವೆಂದು ತಿಳಿಯುವ ಸಾಧನ ಅದು. ಬಸವಣ್ಣನವರು ಅದನ್ನೇ ಆಚರಿಸಿ ತೋರಿಸಿದರು. ಸಂಸಾರವೆಂಬುದು ದೃಷ್ಟಿ ಪವಿತ್ರವಾದಗ, ಭಾವ ಪರಿಶುದ್ಧವಾದಗ, ಲಿಂಗಪೂಜೆಯಷ್ಟೆ ಪೂಜನೀಯವೆಂಬುದನ್ನು ತೋರಿಸಿ ಕೊಟ್ಟರು. ಕಾಯಕವನ್ನೇ ಕೈಲಾಸವೆಂದು ಗೌರವಿಸಿದರು. ಪ್ರಸಾದ ಕಾಯ ಕೆಡಿಸಲಾಗದೆಂದರು. ತನುವನ್ನು ಬಳಲಿಸಿ ಕಾಯಕವಷ್ಟು ಮಾಡಿ ದಾಸೋಹ ಮಾಡಬೇಕೆಂದರು. ವ್ಯಕ್ತಿ ತಾನೂ ಬದುಕಬೇಕು, ಸಮಾಜವೂ ಬದುಕುವಂತೆ ಸಹಕರಿಸಬೇಕು ಎಂಬುದನ್ನು ಬಸವಣ್ಣನವರು ಬದುಕಿ ತೋರಿದರು. ಆ ಹಾದಿ ಯನ್ನು ಅನುಸರಿಸುವುದರಿಂದ ಲೋಕಕ್ಕೆ ಒಳ್ಳಿತಾಗುತ್ತದೆ ಎಂದು ಪರಮ ಪೂಜ್ಯ ಶ್ರೀ ಶ್ರೀಗಳು ಅಧ್ಯಕ್ಷ ಪೀಠದಿಂದ ಆಶೀರ್ವಚನ ನೀಡಿದರು.

ರಾತ್ರಿ ಹತ್ತು ಘಂಟೆಗೆ ಜಗಜ್ಯೋತಿ ಬಸವೇಶ್ವರ ನಾಟಕ ಪ್ರಾರಂಭವಾಯಿತು. ಬೆಳಗಿನ ಆರೂವರೆಯವರೆಗೆ ನಿರಂತರವಾಗಿ ಸಾಗಿತು. ಒಂದಾದ ಮೇಲೊಂದರಂತೆ ದೃಶ್ಯಗಳು ಅರಳುತ್ತ ಹೋದವು. ಬಸವಣ್ಣನ ಹುಟ್ಟು ಮೊದಲುಗೊಂಡು ಐಕ್ಯದ ವರೆಗೆ ಸರ್ವಸ್ವ ಜೀವನವನ್ನು ತೆರೆದು ತೋರಿಸಿದವು. ನೋಡಿದ ಪ್ರೇಕ್ಷಕರು ನಿಬ್ಬೆರ ಗಾದರು. ಕಣ್ಣೂರಿನ ಪುಣ್ಯ ಇಂದು ಅಣ್ಣನ ಕಥೆ ನಾಟಕ ರೂಪದಲ್ಲಿ ಕಾಣುವಂತಾ ಯಿತು ಎಂದು ಹಿರಿಯರೊಬ್ಬರು ಹೇಳುತ್ತಿದ್ದಂತೆಯೇ ಸಿದ್ಧಗಂಗೆಯ ಸ್ವಾಮಿಗಳ ದಯೆಯಿಂದ ಇಷ್ಟೆಲ್ಲಾ ನಡೆದಿದೆಯಪ್ಪಾ ಎಂದು ಮತ್ತೊಬ್ಬರು ಹೇಳಿದರು.





3 ವಿಷಯ. "ಸಿದ್ಧಗಂಗಾ ಮಾಸ ಪತ್ರಿಕೆ" ಪತ್ರಗಳ ತಪಾಸಣೆ ಬಗ್ಗೆ.

**ತೀರ್ಮಾನ:–** "ಸಿದ್ಧಗಂಗಾ ಮಾಸಪತ್ರಿಕೆ" ಯ ತಪಾಸಣೆ ಮಾಡಿಸಿದ ವರದಿಯನ್ನು ಮುಂದಿನ ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ಹಾಜರು ಪಡಿಸುವಂತೆ ಸಂಬಧಪಟ್ಟವರಿಗೆ ಸೂಚನೆ ನೀಡಲಾಯಿತು.

4 ವಿಷಯ. ಶ್ರೀ ಕ್ಷೇತ್ರದ ಸಂಬಂಧವಾಗಿ ಇತ್ತೀಚೆಗೆ ಉದ್ಭವಿಸಿರುವ ಅಹಿತಕರ ವಾತಾವರಣದ ಬಗ್ಗೆ.

**ತೀರ್ಮಾನ:–** ಶ್ರೀ ಗೌರೀಶಂಕರ ಸ್ವಾಮಿಗಳವರ ಉತ್ತರಾಧಿಕಾರ ಮಹೋತ್ಸವದಲ್ಲಿ ತಮ್ಮ ತನು, ಮನ, ಧನಗಳನ್ನು ಅರ್ಪಿಸಿದ ಬಗ್ಗೆ ಶ್ರೀ ಗೌರೀಶಂಕರ ಸ್ವಾಮಿಗಳವರಿಂದಲೇ ಅಭಿನಂದನೆಯನ್ನು ಪಡೆದು ಸಂತೋಷಪಟ್ಟಿದ್ದ ಹಳೆಯ ವಿದ್ಯಾರ್ಥಿಗಳ ಸಂಘವು ಪ್ರಸ್ತುತವಾಗಿ ಶ್ರೀ ಸಿದ್ಧಗಂಗಾಕ್ಷೇತ್ರದ ಸಂಬಂಧವಾಗಿ ಉದ್ಭವಿಸಿರುವ ಪರಿಸ್ಥಿತಿಯ ಬಗ್ಗೆ ಸೂಕ್ತ ಪರಿಹಾರಗಳನ್ನು ಕಂಡುಕೊಳ್ಳಲು ಉತ್ತರಾಧಿಕಾರಿಗಳಾದ ಶ್ರೀ ಗೌರೀಶಂಕರ ಸ್ವಾಮಿಗಳವರು ಸತ್‌ಶಿಷ್ಯರು ಅನುಸರಿಸಬೇಕಾದ ಮಾರ್ಗವನ್ನು ತ್ಯಜಿಸಿ, ಈ ಸಮಸ್ಯೆಯನ್ನು ಬೀದಿಗೆಳೆದು ಶ್ರೀ ಕ್ಷೇತ್ರದ ಧವಳಕೀರ್ತಿ, ಗೌರವಗಳಿಗೆ ಧಕ್ಕೆ ತಂದಿರುವ ಬಗ್ಗೆ ತನ್ನ ತೀವ್ರ ನೋವನ್ನು ವ್ಯಕ್ತಪಡಿಸುತ್ತಾ ಶ್ರೀ ಗೌರೀಶಂಕರ ಸ್ವಾಮಿಗಳವರು ತಮ್ಮ ಈಗಿನ ದಾರಿಯನ್ನು ತ್ಯಜಿಸಿ ಸತ್‌ಶಿಷ್ಯವೃತ್ತಿಯಿಂದ ಪೂಜ್ಯ **ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ** ಪ್ರೀತ್ಯಾಶೀರ್ವಾದಗಳನ್ನು ಗಳಿಸುವುದರ ಮುಖೇನ ಮಾತ್ರ ಈ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲು ವಿನಂತಿ ಮಾಡುತ್ತಾ ಈ ಬಗ್ಗೆ ಶ್ರೀ ಕ್ಷೇತ್ರದ ಅಧಿಪತಿಗಳಾದ ಪೂಜ್ಯ **ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು** ತೆಗೆದುಕೊಳ್ಳುವ ಯಾವುದೇ ತೀರ್ಮಾನಕ್ಕೂ ತಮ್ಮ ಬೆಂಬಲವನ್ನು ವ್ಯಕ್ತಪಡಿಸುತ್ತದೆ" ಎಂದು ಕಾರ್ಯಕಾರಿ ಸಭೆಯು ಸರ್ವಾನುಮತದಿಂದ ತೀರ್ಮಾನಿಸಿತು.

ಸಭೆಯಲ್ಲಿ ಹಾಜರಿದ್ದ 21 ಸದಸ್ಯರ ಸಹಿಗಳು

ಸಹಿ

( ಎಂ.ಎಸ್ ಚನ್ನಬಸಪ್ಪ )

ಸಭೆಯ ಅಧ್ಯಕ್ಷರು.

" ನಕಲು "

